# ಅಮ್ಮೆಂಬಳ ಸುಬ್ಬರಾವ್ ಪೈ

## ಕೆನರಾ ವಿದ್ಯಾ ಸಂಸ್ಥೆಗಳು ಮತ್ತು ಕೆನರಾ ಬ್ಯಾಂಕಿನ ನೂರು ವರ್ಷಗಳ ವೈಭವ







ಡಾ. ಮೂಲ್ಕಿ ಅಚ್ಯುತ ಆರ್. ಕುಡ್ವ



## ಈ ಕೃತಿಯ ಪ್ರಾಯೋಜಕರಾದ
## ಶ್ರೀಮಾನ್ ಪಿ. ದಯಾನಂದ ಪೈಯವರ ಬಗ್ಗೆ ಎರಡು ಮಾತು

ಮೂಲತಃ ಪಾಣೆಮಂಗಳೂರಿನ ಮಧ್ಯಮ ವರ್ಗದ ಗೌರವಾನ್ವಿತ ಗೌಡ ಸಾರಸ್ವತ ಕುಟುಂಬದಲ್ಲಿ ಜನನ. ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ, ಸರಕಾರಿ ಕಾಲೇಜಿನಲ್ಲಿ ಬಿ.ಎಸ್ಸಿ. ಪದವಿಯನ್ನು ಪಡೆದು, ಮೈಸೂರಿನಲ್ಲಿ ಬಿ.ಎಲ್., ಬಿ.ಇ., ಎಂ.ಟೆಕ್. ಉನ್ನತ ಶಿಕ್ಷಣವನ್ನು ಮಾಡಿರುವರು. ಆಟ, ನಾಟಕ, ಕ್ರೀಡೆ, ದೇಹದಾರ್ಢ್ಯ ಹವ್ಯಾಸಗಳಲ್ಲಿ ತನ್ನನ್ನು ಸಕ್ರೀಯವಾಗಿ ತೊಡಗಿಸಿಕೊಂಡಿದ್ದರು. ದೇಹದಾರ್ಢ್ಯದಲ್ಲಿ ಮಿಸ್ಟರ್ ಗಾರ್ವನ್‌ಮೆಂಟ್ ಕಾಲೇಜು, ಮಿಸ್ಟರ್ ದಕ್ಷಿಣ ಕನ್ನಡ, ಮಿಸ್ಟರ್ ಮೈಸೂರು ಪ್ರಶಸ್ತಿಯನ್ನು ಪಡೆದಿರುವರು. 1964ರಲ್ಲಿ ಎನ್‌ಸಿಸಿ. ಕೆಡೆಟ್ ಆಗಿ ಪ್ರಜಾಪ್ರಭುತ್ವ ದಿನಾಚರಣೆಯಲ್ಲಿ ಭಾಗವಹಿಸಿರುವುದು ಹೆಗ್ಗಳಿಕೆಯಾಗಿದೆ. ಪ್ರಸಕ್ತ ಯಶಸ್ವಿ ರಿಯಲ್ ಎಸ್ಟೇಟ್ ಉದ್ಯಮಿ, ಸೆಂಚುರಿ ಬಿಲ್ಡರ್ಸ್ ಸಂಸ್ಥೆಯ ಅಧ್ಯಕ್ಷರು, ಕಾಶೀ ಮಠ ಬೆಂಗಳೂರು ಅಧ್ಯಕ್ಷರು, ರೋಟರಿ ಮತ್ತು ಪೌಲ್ ಹ್ಯಾರಿಸ್ ಫೆಲೋ ಗೌರವ ಪ್ರಧಾನಕರು, ಸಮಾಜ ಸೇವೆ ಮತ್ತು ಅನೇಕ ಸಂಘ ಸಂಸ್ಥೆಗಳಿಗೆ ಕೊಡುಗೈ ದಾನಿಗಳಾಗಿರುವರು.

1991 ಕರ್ನಾಟಕ ಸರಕಾರದಿಂದ ಕರ್ನಾಟಕ ಉದ್ಯಮಿ ಪ್ರಶಸ್ತಿ, 2005 ಕೊಂಕಣಿ ಸಾಹಿತ್ಯ ಅಕಾಡೆಮಿ, ಕರ್ನಾಟಕ ಇವರಿಂದ ಮಹಾನ್ ಮನುಷ್ಯ ಸನ್ಮಾನ ಪಡೆದಿರುವಿರಿ

ಈ ಪುಸ್ತಕ ಪ್ರಾಯೋಜಕತ್ವ ಅವರ ಮಹಾನ್‌ವ್ಯಕ್ತಿತ್ವ ಮತ್ತು ಉದಾರತೆಗೆ ಇನ್ನೊಂದು ನಿದರ್ಶನ. ಈ ಬಗ್ಗೆ ನಾನು ಅವರಿಗೆ ಚಿರಋಣಿ. ಈ ಮೂಲಕ ದೇವರಲ್ಲಿ ಅವರ ಎಲ್ಲಾ ಶುಭ ಕಾರ್ಯಗಳಿಗೆ ಯಶಸ್ಸು ಬಯಸುವ,

ಮಿತ್ರ, ಶುಭಾಕಾಂಕ್ಷಿ
**ಡಾ. ಎಮ್. ಎ.ಆರ್. ಕುಡ್ವ, ಮುಲ್ಕಿ**

ವಳಲಂಕೆಯ ಶ್ರೀ ವೆಂಕಟರಮಣ, ಉಗ್ರನರಸಿಂಹ,
ಬಿಂಧುಮಾಧವ ಮತ್ತು ವೀರವಿಠಲ ದೇವರುಗಳು



ಈ ನನ್ನ ಕೃತಿಯನ್ನು ಶ್ರೀ ದೇವರ ಪಾದಾರವಿಂದಗಳಿಗೆ ಸಮರ್ಪಣೆ.



ಈ ಕೃತಿ  ಪರಮ ಪೂಜ್ಯ ಶ್ರೀಮದ್ ಭುವನೇಂದ್ರ ಸ್ವಾಮೀಜಿಯವರ ನೆನಪಿನ ಕಾಣಿಕೆಯಾಗಿ
ಪ್ರಕಟಿಸಲು ಸಂತೋಷ ಪಡುತ್ತೇನೆ.



ತಾ. 4-2-2007ರಂದು ಸಹಸ್ರಪೂರ್ಣ ಚಂದ್ರದರ್ಶನ ಸಂದರ್ಭದಲ್ಲಿ
ಪರಮಪೂಜ್ಯ ಶ್ರೀ ಶ್ರೀ ಶ್ರೀಮದ್ ಸುಧೀಂದ್ರತೀರ್ಥ ಸ್ವಾಮೀಜಿಯವರ ದಿವ್ಯಹಸ್ತದಿಂದ
ಪಾಣೆಮಂಗಳೂರು ವೀರವಿಠ್ಠಲ ದೇವರ ಸನ್ನಿಧಿಯಲ್ಲಿ ಈ ಪುಸ್ತಕದ ಬಿಡುಗಡೆ



## H. H. SHRIMAD SUDHINDRA THIRTHA SWAMI

**SHREE KASHI MATH SAMSTHAN**

**VARANASI** Sri Kashi Math

Camp Ambalamedu

Ref: Blessings of Message to the Date 6-1-2007.

Book "Ammembal Subba Rao Pai, Canara educational institutions and 100 years of Glory of Canara Bank," by Dr. M. A. R. Kudva-Mulky, in the name of Sri Narayana.

May the work be pleasing to Lord Sri Vyasa Raghupathi and Lord Ugra Narasimha of Mulky and Parama Poojaneeya Sri Srimad Bhuvanendra Thirtha Sripadangalu, is sincerely prayed.

Once more with Hearty blessings to Sri Dr. M. A. R. Kudva-Mulky.

[signature]

# ಅಮ್ಮೆಂಬಳ ಸುಬ್ಬರಾವ್ ಪೈ,
# ಕೆನರಾ ಸಂಸ್ಥೆಗಳು ಮತ್ತು ಕೆನರಾ ಬ್ಯಾಂಕಿನ
# ನೂರು ವರ್ಷಗಳ ವೈಭವ

ಡಾ। ಮುಲ್ಕಿ ಅಚ್ಯುತ ಆರ್. ಕುಡ್ವ

2007

"ಅಮ್ಮೆಂಬಳ ಸುಬ್ಬರಾವ್ ಪೈ, ಕೆನರಾ ಸಂಸ್ಥೆಗಳು ಮತ್ತು ಕೆನರಾ ಬ್ಯಾಂಕಿನ ನೂರು ವರ್ಷಗಳ ವೈಭವ" written by: Dr. Mulki Achutha R. Kudva

ಮೊದಲ ಮುದ್ರಣ : 2007


Cell Phone: 98450-82257

ಮುಖ ಪುಟ ವಿನ್ಯಾಸ : **ತೇಜ ಗ್ರಾಫಿಕ್ಸ್**, ಮಂಗಳೂರು

ಈ ಕೃತಿ ಮಾರಾಟಕ್ಕಾಗಿ ಅಲ್ಲ. ಶ್ರೀ ಅಮ್ಮೆಂಬಳ ಸುಬ್ಬರಾವ್ ಪೈಯವರ ವ್ಯಕ್ತಿತ್ವ ಮತ್ತು ಕೆನರಾ ಸಂಸ್ಥೆಗಳ ಪ್ರಚಾರವೇ ಈ ಕೃತಿಯ ಉದ್ದೇಶ

ಮುದ್ರಣ : **ಶಾರದಾ ಪ್ರೆಸ್**, ಕಾರ್‌ಸ್ಟ್ರೀಟ್, ಮಂಗಳೂರು

ಲೇಖಕರ ಇತರ ಕೃತಿಗಳು:

- ಮೂಲ್ಕಿಯ ಸುಪುತ್ರ ಕಕ್ವಗುತ್ತು ಮೂಲ್ಕಿ ಸುಂದರರಾಮ ಶೆಟ್ಟಿ ಮತ್ತು ವಿಜಯಾ ಬ್ಯಾಂಕ್
- ಮುಲ್ಕಿ ಮತ್ತು ಈ ಪುಣ್ಯಸ್ಥಳದ 75 ಪ್ರತಿಭಾವಂತರು



# ಮುನ್ನುಡಿ

ಅಮ್ಮೆಂಬಳ ಸುಬ್ಬರಾವ್ ಪೈಗಳಂತಹ ಮಹಾನ್ ವ್ಯಕ್ತಿಯ ಹುಟ್ಟು ಸಾವುಗಳ ಮಧ್ಯಂತರದ ಅವಧಿಯಲ್ಲಾದ ಸತ್ಯ ಘಟನೆಗಳನ್ನೊಳಗೊಂಡ ಈ ಕಿರು ಹೊತ್ತಿಗೆಗೆ ಮುನ್ನುಡಿ ಬರೆಯಬೇಕೆಂದು ಮಾನ್ಯ ಡಾ. ಎಮ್. ಅಚ್ಯುತ ಕುಡ್ವರು ನನ್ನನ್ನು ಕೇಳಿದಾಗ ನನಗೆ ಬಹಳಷ್ಟು ಆಶ್ಚರ್ಯವಾಯಿತು. ಈ ಕೆಲಸ ನನ್ನ ಶಕ್ತಿಗೆ ಮೀರಿದ್ದರೂ, ಡಾ. ಕುಡ್ವರ ಒತ್ತಡಕ್ಕೆ ಮಣಿದು ಈ ಮುನ್ನುಡಿಯನ್ನು ಬರೆಯಲು ಒಪ್ಪಬೇಕಾಯಿತು.

ಪ್ರಪ್ರಥಮವಾಗಿ ನಾನು ಜನ್ಮ ತಳೆದ ಮೂಲಿಕಾಪುರ ಈಗಿನ ಮುಲ್ಕಿ ಕ್ಷೇತ್ರದ ಬಗ್ಗೆ ಕೆಲವು ಚಾರಿತ್ರಿಕ ಘಟನೆಗಳನ್ನು ಹೇಳಬಯಸುತ್ತೇನೆ. ರಾಮಾಯಣದ ಕಾಲದಲ್ಲಿ ಲಕ್ಷ್ಮಣ ಮೇಘನಾದರ ಯುದ್ಧದ ಸಮಯದಲ್ಲಿ ಮೇಘನಾದನ ಬಾಣಹತಿಯಿಂದ ಮೂರ್ಛೆ ಹೋದ ಲಕ್ಷ್ಮಣನನ್ನು ಬದುಕಿಸಲು ವೈದ್ಯ ಸುಷೇಣನ ಆದೇಶದಂತೆ ಸಂಜೀವಿನೀ ಪರ್ವತವನ್ನೇ ಎತ್ತಿ ಲಂಕೆಯತ್ತ ಸಾಗಿ ಬರುತ್ತಿದ್ದಾಗ ಮೂಲಿಕಾಪುರದ ಪರಿಸರ ನೋಡಿ ಇದನ್ನೇ ಲಂಕೆ ಎಂದು ಪರಿಭ್ರಮಿಸಿ ನಮ್ಮ ದೇವಳದ ಬಳಿಯ ಗುಡ್ಡದ ಮೇಲೆ ಇಳಿದನಂತೆ. ಪರಿಸರ ಸಮವಿದ್ದರೂ, ಲಂಕೆಯ ವೈಭವವನ್ನು ಕಾಣದೆ, ಇದು ಲಂಕೆಯಲ್ಲ ಒಳಲಂಕೆ ಎಂದು ಉಚ್ಚರಿಸಿ, ಪುನಃ ಪರ್ವತವನ್ನು ಕೈಯಲ್ಲಿ ಎತ್ತಿ ಲಂಕೆಯತ್ತ ಸಾಗಿದನಂತೆ. ತದನಂತರ ಈ ಸ್ಥಳಕ್ಕೆ "ಒಳಲಂಕೆ" ಎಂದು ಹೆಸರು ಬಂದಿತು. ಇದು ದಂತಕತೆಯಾಗಿರಲೂಬಹುದು. ಇಲ್ಲವೇ ನಿಜವಾಗಿರಲೂ ಬಹುದು. ಹನುಮಂತನು ಕೆಳಗಿಟ್ಟ ಪರ್ವತದಿಂದ ಕೆಲವು ಗಿಡ ಮೂಲಿಕೆಗಳು ಪಸರಿ ಬಿದ್ದಿತ್ತಂತೆ. ಅವುಗಳಲ್ಲಿ ಹಲವು ರೋಗ ಶಮನ ಮೂಲಿಕೆಗಳಿದ್ದು ಇವು ಸುತ್ತಮುತ್ತಲ ರೋಗಿಗಳಿಗೆ ವರದಾನವಾಯಿತು! ಈ ಕಾರಣ ಈ ಊರಿಗೆ ಮೂಲಿಕಾಪುರ ಎಂದು ಹೆಸರು ಬಂದಿರಬಹುದು.

ಇನ್ನು ಈ ಕ್ಷೇತ್ರದ ವಿಷಯ, ಬಪ್ಪನಾಡು, ಕಾರ್ನಾಡು, ಮಾನಂಪಾಡಿ ಈ ಮೂರು ಗ್ರಾಮಗಳ ಸಮ್ಮಿಲನವೇ ಮುಲ್ಕಿ ಎಂಬ ಈ ಪುಣ್ಯಭೂಮಿ.

ಬಪ್ಪನಾಡಿನ ಶ್ರೀ ದುರ್ಗಾಪರಮೇಶ್ವರಿ, ಕಾರ್ನಾಡಿನ ಶ್ರೀ ಹರಿಹರ ಕ್ಷೇತ್ರ ಮಾನಂಪಾಡಿಯ ಒಳಲಂಕೆಯಲ್ಲಿರುವ ಶ್ರೀ ಉಗ್ರನರಸಿಂಹ, ಶ್ರೀ ವೆಂಕಟರಮಣ ಹಾಗೂ ಶ್ರೀ ಬಿಂದು ಮಾಧವ ಇವರುಗಳ ಸಾನ್ನಿಧ್ಯವಿರುವ ಶ್ರೀ ವೆಂಕಟರಮಣ ದೇವಸ್ಥಾನ. ಎತ್ತರದ ಕೋಟೆಯ ಪರ್ವತದಲ್ಲಿ ನಿಂತ ವೀರ ಮಾರುತಿ. ವಿಚಿತ್ರವೆಂದರೆ ಇಲ್ಲಿಯ ದೇವರ ಪ್ರತಿಮೆಗಳನ್ನು ನಿರ್ಮಿಸಿ, ಪ್ರಾಣಪ್ರತಿಷ್ಠಾಪನೆ ಮಾಡಿಲ್ಲ. ಸಾನ್ನಿಧ್ಯಯುಕ್ತ ದೇವರ ಪ್ರತಿಮೆಗಳು ಮೂಲ್ಕಿಯನ್ನೇ ಆರಿಸಿ, ನೆಲೆನಿಂತವೆಂದಾಗ ಈ ಪುಣ್ಯಕ್ಷೇತ್ರದ ಮಹಿಮೆ ಏನೆಂಬುದನ್ನು ನೀವೇ ಮನವರಿಕೆ ಮಾಡಿ.

ಮಹಾನ್ ವ್ಯಕ್ತಿ ಶ್ರೀ ಅಮ್ಮೆಂಬಳ ಸುಬ್ಬರಾವ್ ಪೈಯವರ ಹುಟ್ಟುಸಾವುಗಳ ಮಧ್ಯಂತರದ ಅವರ ಜೀವನದ ಆಗುಹೋಗುಗಳ ಬಗ್ಗೆ ಬರೆದ ಈ ಕಿರು ಲೇಖನಕ್ಕೆ ಮುಲ್ಕಿ ಕ್ಷೇತ್ರದ ಸಂಬಂಧವೇನು ಎಂದು ನೀವು ಕೇಳಬಹುದು. ಇದೆ. ಗಹನವಾದ ಸಂಬಂಧವಿದೆ. ಏಕೆಂದರೆ ಶ್ರೀಯುತ ಪೈಯವರು ಹುಟ್ಟಿದ್ದು 1852ನೇ ಇಸವಿಯ ನವಂಬರ್ 19 ರಂದು ಮುಲ್ಕಿಯ ಶ್ರೀ ವಡೇರಬೆಟ್ಟು ಪದ್ಮನಾಭ ಅಣ್ಣಪ್ಪ ಕಾಮತರ ಮುಳಿಹುಲ್ಲು ಹೊದಿಸಿದ ಮನೆಯಲ್ಲಿ. ಮುಂದೆ ಆ ಮನೆ ಮತ್ತು ಸ್ಥಳ ಶ್ರೀಯುತ ವಿ.ಪದ್ಮನಾಭ ಕಾಮತರ ಮಗ ಶ್ರೀಧರ ಪದ್ಮನಾಭ ಕಾಮತರ ತಾಬೆಗೆ ಬಂತು. ಅವರ ಪೀಳಿಗೆಯವರಾರೂ ಇಲ್ಲಿ ವಾಸ್ತವ್ಯ ಇಲ್ಲದ ಪ್ರಯುಕ್ತ ಈ ಸ್ಥಳ ನಿವೇಶನ ಸಹಿತ ಅದರ ವಾರೀಸುದಾರರು ಮುಲ್ಕಿಯ ಜಿ.ಎಸ್.ಬಿ ಸಭೆಗೆ ದಾನರೂಪದಲ್ಲಿ ಕೊಟ್ಟರು. ಈ ಸ್ಥಳದಲ್ಲಿ ಜಿ.ಎಸ್.ಬಿ ಸಭೆಯುವರು ಸಾರ್ವಜನಿಕರ ಸಹಾಯದಿಂದ ಕಟ್ಟಡ ನಿರ್ಮಿಸಿದರು. ಈ ಕಟ್ಟಡದ ಶಂಕು ಸ್ಥಾಪನೆ ಮತ್ತು ಉದ್ಘಾಟನೆಯನ್ನು ನಮ್ಮ ಪರಮ ಪೂಜ್ಯ ಗುರುವರ್ಯ ಶ್ರೀಮದ್ ಶ್ರೀ ಸುಧೀಂದ್ರ ತೀರ್ಥಸ್ವಾಮೀಜಿಯವರ ದಿವ್ಯಹಸ್ತದಿಂದ ಮಾಡಿಸಿದರು. ಇಂತಹ ಪುಣ್ಯಸ್ಥಳದಲ್ಲಿ ಮುಲ್ಕಿಯ ಕೆನರಾ ಬ್ಯಾಂಕಿನ ಶಾಖೆಯನ್ನು ಸ್ಥಳಾಂತರಿಸಿದ ಕೀರ್ತಿ ಮುಲ್ಕಿ ಜಿ.ಎಸ್.ಬಿ ಸಭಾ ಕಾರ್ಯಕರ್ತರಿಗೆ ಸಲ್ಲುತ್ತದೆ.

ಮಂಗಳೂರು ಕೆನರಾ ಹೈಸ್ಕೂಲು ಮತ್ತು ಕೆನರಾ ಹೆಣ್ಣುಮಕ್ಕಳ ಶಾಲೆಯನ್ನು ಸ್ಥಾಪಿಸುವ ಮುನ್ನ ಶ್ರೀ ಪೈಗಳು ಮುಲ್ಕಿಯ ದೇವಳದ ಕಾಳಭೈರವ

ದರ್ಶನದಲ್ಲಿ ವಿಷಯವನ್ನು ನಿವೇದಿಸಿ ಅಲ್ಲಿ ಅಭಯ ಪಡೆದುದಾಗಿ ಅವರೇ ಹೇಳುತ್ತಿದ್ದರಂತೆ. ಇನ್ನು ಬ್ಯಾಂಕು ಸ್ಥಾಪಿಸುವ ಮೊದಲು ಇಲ್ಲಿ ದೇವದರ್ಶನದಲ್ಲಿ 4 ವರಹ ಅಂದರೆ ಹದಿನಾರು ರೂಪಾಯಿ ಕಾಣಿಕೆಯಿಟ್ಟು ಮೌನವಾಗಿ ಪ್ರಾರ್ಥಿಸಿದಾಗ, ಶ್ರೀ ದೇವರು ಸೂರ್ಯ ವ್ರತ ಮಾಡು ನಿನಗೆ ಅಜರಾಮರ ಕೀರ್ತಿ ದೊರಕುವುದೆಂದು ನಿರ್ಭಯವಾಯಿತಂತೆ. ಸೂರ್ಯವ್ರತದ ಬಗ್ಗೆ ಈ ಹೊತ್ತಿಗೆಯಲ್ಲಿ ವಿವರವಿದ್ದ ಪ್ರಯುಕ್ತ ನಾನು ಹೇಳಬಯಸುವುದಿಲ್ಲ. 19ನೇ ಶತಮಾನದ ಅಂತ್ಯದಲ್ಲಿ ಮುಲ್ಕಿ ದೇವಳದಲ್ಲಿ ಪೈದಿಕರಿಗೂ,ಆಡಳಿತ ವರ್ಗದವರಿಗೂ ತಪ್ಪು ತಿಳುವಳಿಕೆಯಿಂದ ಅಂತಃಕಲಹದ ವಾತಾವರಣ ನಿರ್ಮಾಣವಾಗಿತ್ತು. ಆಗ ಪೈಗಳು ಮಧ್ಯಸ್ತಿಕೆ ವಹಿಸಿ ಅವಾರ್ಡ್ ಮೂಲಕ ದೇವಳದ ಆಡಳಿತ ಸೂತ್ರ ತಯಾರಿಸಿ ಕೋರ್ಟಿಗೆ ಹಾಜರುಪಡಿಸಿದರಂತೆ. 1921ರಲ್ಲಿ ಇದರ ತೀರ್ಮಾನವಾಗಿ, ಇಂದಿಗೂ ಈ ಸ್ಕೀಮಿನ ಪ್ರಕಾರವಾಗಿಯೇ ದೇವಸ್ಥಾನದ ಆಡಳಿತ ನಡೆಯುತ್ತಲೇ ಇದೆ.

ಬರೆಯುವುದಕ್ಕೆ ಇನ್ನೂ ಹೆಚ್ಚು ವಿಷಯ ಸಂಗ್ರಹವಿದ್ದರೂ, ಕಿರು ಹೊತ್ತಿಗೆಗಿಂತಲೂ ಮುನ್ನುಡಿಯು ಜಾಸ್ತಿಯಾಗಬಾರದೆಂಬ ಕಾರಣ ಇದನ್ನು ಇಲ್ಲೇ ಮುಗಿಸುತ್ತೇನೆ.

ಇನ್ನು ಈ ಮುನ್ನುಡಿ ಬರೆಯಲು ಅನುವು ಮಾಡಿಕೊಟ್ಟ ಶ್ರೀಯುತ ಅಚ್ಯುತ ಕುಡ್ವರಿಗೆ ನನ್ನ ವಂದನೆಗಳನ್ನು ಅರ್ಪಿಸಬಯಸುತ್ತೇನೆ. ಡಾಕ್ಟರಾಗಿದ್ದು ಹಲವಾರು ಸಾರ್ವಜನಿಕ ಸೇವೆಯಲ್ಲಿ ನಿರತರಾಗಿದ್ದು ತನ್ಮಧ್ಯೆ ಶ್ರೀಯುತ ಅಮ್ಮೆಂಬಳ ಸುಬ್ರಾಯ ಪೈಯವರ ಜನನ ಮರಣಗಳ ಮಧ್ಯಂತರ ಜೀವನದ ಈ ಕಿರುಹೊತ್ತಗೆ ಹೊರತಂದ ಶ್ರೀಯುತ ಕುಡ್ವರ ಸಾಹಸವೇ ಸಾಹಸ, ಅವರಿಗೆ ಮುಲ್ಕಿ ಶ್ರೀ ಉಗ್ರ ನರಸಿಂಹ ದೇವರು ದೀರ್ಘಾಯುಷ್ಯ, ಆರೋಗ್ಯ ಸಂಪತ್ತನ್ನು ಕರುಣಿಸಿ ಕಾಪಾಡಲೆಂದು ಶ್ರೀ ದೇವರೊಡನೆ ಪ್ರಾರ್ಥಿಸಿ ಈ ಮುನ್ನುಡಿಯನ್ನು ಇಲ್ಲೇ ಮುಗಿಸುತ್ತೇನೆ.

ಶುಭ ಹಾರೈಕೆಗಳೊಂದಿಗೆ,

**ವಡೇರಬೆಟ್ಟು ಪುಂಡಲೀಕ ಶ್ರೀಧರ ಕಾಮತ್**



# ಪ್ರಸ್ತಾವನೆ

ಡಾ. ಅಚ್ಯುತ್ ಕುಡ್ವರು ಶ್ರೀ ಅಮ್ಮೆಂಬಳ ಸುಬ್ಬರಾವ್ ಪೈ, ಅವರು ಸ್ಥಾಪಿಸಿದ ಸಂಸ್ಥೆಗಳು ಮತ್ತು ಕೆನರಾ ಬ್ಯಾಂಕಿನ ನೂರು ವರ್ಷಗಳ ವೈಭವದ ಬಗ್ಗೆ ಒಂದು ಸಣ್ಣ ಪುಸ್ತಕದ ರೂಪದಲ್ಲಿ ಬರೆದು ಜನತೆಗೆ ಅರ್ಪಿಸಿದ್ದಾರೆ. ಸುಬ್ರಾಯ ಪೈಯವರ ಧೀಮಂತ ವ್ಯಕ್ತಿತ್ವ ಮತ್ತು ತನ್ನ ಪರಿಸರದ ಜನರ ಬಗ್ಗೆ ಪೈಯವರ ಕಾಳಜಿಯನ್ನು ಡಾ.ಕುಡ್ವರು ಈ ಕಿರು ಹೊತ್ತಿಗೆಯಲ್ಲಿ ಬಣ್ಣಿಸಿದ್ದಾರೆ.

ಸುಮಾರು 110 ವರ್ಷಗಳ ಹಿಂದೆಯೇ ಸುಬ್ರಾಯ ಪೈಗಳು ವಿದ್ಯಾಭ್ಯಾಸದ ಬಗ್ಗೆ ಅದರಲ್ಲೂ ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಚಿಂತನೆ ನಡೆಸಿ ಅದಕ್ಕೋಸ್ಕರ ದುಡಿದು ಕೆನರಾ ಶಿಕ್ಷಣ ಸಂಸ್ಥೆಗಳನ್ನು ಹುಟ್ಟು ಹಾಕಿದರು ಎಂದು ಓದಿದರೆ ಅವರ ಬಗ್ಗೆ ಗೌರವ ಮತ್ತು ಅಭಿಮಾನಗಳು ಉಂಟಾಗುತ್ತವೆ.

ಡಾ. ಕುಡ್ವರು ಈ ಹೊತ್ತಿಗೆಯನ್ನು ಮೂರು ಭಾಗಗಳಲ್ಲಿ ಬರೆದಿದ್ದಾರೆ. ಒಂದನೇಯ ಭಾಗದಲ್ಲಿ ಸುಬ್ರಾಯ ಪೈಯವರ ಜೀವನ, ಎರಡನೇಯ ಭಾಗದಲ್ಲಿ ಅವರು ಸ್ಥಾಪಿಸಿದ ವಿದ್ಯಾ ಸಂಸ್ಥೆಗಳು ಮತ್ತು ಮೂರನೇಯ ಭಾಗದಲ್ಲಿ ಕೆನರಾ ಬ್ಯಾಂಕಿನ 100 ವರ್ಷಗಳ ಬೆಳವಣಿಗೆ ಇವುಗಳ ಬಗ್ಗೆ ಕಿರು ಪರಿಚಯ ನೀಡಿದ್ದಾರೆ. ಅವರ ಶ್ರಮವನ್ನು ಮೆಚ್ಚಬೇಕಾದ್ದೆ.

ಕೆನರಾ ಬ್ಯಾಂಕ್ 1906ರಲ್ಲಿ ಕೆನರಾ ಹಿಂದೂ ಪರ್ಮನೆಂಟ್ ಫಂಡ್ ಲಿಮಿಟೆಡ್ ಎಂಬ ಹೆಸರಿನಲ್ಲಿ ಮಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟಿತು. ಅದಕ್ಕಾಗಿ ಕೇವಲ 45 ರೂಪಾಯಿಗಳನ್ನು ಖರ್ಚು ಮಾಡಿದರು. ಮತ್ತು 4 ಮಂದಿ ಉದ್ಯೋಗಿಗಳು ನೇಮಿಸಲ್ಪಟ್ಟರು. 2 ದಶಕಗಳ ನಂತರ ಅದರ

ಮೊದಲನೆಯ ಶಾಖೆ ಕಾರ್ಕಳದಲ್ಲಿ ತೆರೆಯಲ್ಪಟ್ಟಿತು. ಅಲ್ಲಿಂದ ಅದರ ಪ್ರಗತಿ ಊಹಿಸಲು ಅಸಾಧ್ಯವಾಗುವಷ್ಟು ವೇಗದಲ್ಲಿ ಸಾಗಿತು. 1969ರಲ್ಲಿ ರಾಷ್ಟ್ರೀಕೃತಗೊಂಡು ಇಂದು ಅದು ದೇಶದಲ್ಲೇ ಒಂದು ಉನ್ನತ ಸ್ಥಾನವಲ್ಲಿದೆ. ಈಗ ಅದು ದೇಶದಲ್ಲೇ ಸುಮಾರು 2500ಕ್ಕೆ ಮೇಲ್ಪಟ್ಟು ಶಾಖೆಗಳನ್ನು ಪಡೆದಿದೆ. ಅಲ್ಲದೆ ಸುಮಾರು 46000ಕ್ಕೂ ಮೇಲ್ಪಟ್ಟು ಉದ್ಯೋಗಿಗಳನ್ನು ಹೊಂದಿದೆ. ಇವರ ಸ್ಥಾಪಕರು ಸುಬ್ರಾಯ ಪೈಗಳು ಮುಲ್ಕಿಯಲ್ಲಿ ಹುಟ್ಟಿದವರು, ದಕ್ಷಿಣ ಕನ್ನಡದವರೆಂದು ಹೇಳಲು ನಾವು ಹೆಮ್ಮೆ ಪಡಬೇಕಲ್ಲವೇ?

ಇಂದಿನ ಯುವ ಜನಾಂಗ ಸುಬ್ರಾಯ ಪೈಯವರ ಬಗ್ಗೆ ಓದಿ, ತಿಳಿದು ಅದರಿಂದ ಸ್ಫೂರ್ತಿ ಪಡೆಯಲಿಯೆಂದೂ ಡಾ. ಕುದ್ವರ ಶ್ರಮ ಸಾರ್ಥಕವಾಗಲಿಯೆಂದೂ ನಾನು ಹಾರೈಸುತ್ತೇನೆ.

**ಡಾ. ಮೀರಾ ಕಾಮತ್**



# ಅಮ್ಮೆಂಬಳ ಸುಬ್ಬರಾವ್ ಪೈ, ಕೆನರಾ ಸಂಸ್ಥೆಗಳು ಮತ್ತು ಕೆನರಾ ಬ್ಯಾಂಕಿನ ನೂರು ವರ್ಷಗಳ ವೈಭವ

## ಲೇಖಕರ ಆರಂಭಿಕ ಮಾತು

ಕರ್ನಾಟಕ ರಾಜ್ಯದ ಕರಾವಳಿ ಪ್ರದೇಶದಲ್ಲಿರುವ ದಕ್ಷಿಣ ಕನ್ನಡ ಜಿಲ್ಲೆ ವಿವಿಧ ಕ್ಷೇತ್ರಗಳಲ್ಲಿ ಪ್ರಸಿದ್ಧಿಯನ್ನು ಪಡೆದಿರುವುದು ನಮಗೆಲ್ಲ ತಿಳಿದಿರುವ ವಿಷಯ. ಈ ಜಿಲ್ಲೆಯಲ್ಲಿ ಮುಲ್ಕಿ ಎಂಬ ಸಣ್ಣ ನಗರವೂ ಶಾಂಭವಿ ನದಿಯ ತಟದಲ್ಲಿ ಶಾಂತಿ ಹಾಗೂ ಪ್ರೀತಿಯ ದ್ಯೋತಕವೆಂಬಂತೆ ಹಲವು ಪ್ರಸಿದ್ಧ ವ್ಯಕ್ತಿಗಳ ಜನ್ಮಸ್ಥಳಗಳವಾಗಿದೆ. 'ಕೆನರಾ ಬ್ಯಾಂಕ್' ಹಾಗೂ 'ಕೆನರಾ' ಸಂಸ್ಥೆಗಳ ಸಂಸ್ಥಾಪಕ ಶ್ರೀ ಅಮ್ಮೆಂಬಳ ಸುಬ್ಬರಾವರವರು 1852ನೇ ಸಾಲಿನ ನವೆಂಬರ್ 19ರಂದು ಮುಲ್ಕಿಯಲ್ಲಿ ಜನಿಸಿದರು. ಶ್ರೀಯುತರು ವಕೀಲ ಉಪೇಂದ್ರ ಪೈಯವರ ಕೊನೆಯ ಪುತ್ರರು. ಬಿ.ಎ. ಪದವಿ ಬಳಿಕ, ಕಾನೂನು ಪರೀಕ್ಷೆ(ಬಿ.ಎಲ್.) ಮುಗಿಸಿ, ಶ್ರೀಯುತರು ಪ್ರಸಿದ್ಧ ವಕೀಲರಾಗಿ ಹೆಸರುವಾಸಿಯಾದರು. ಸಮಾಜದ ಹಾಗೂ ಜನರ ಒಳಿತಿಗಾಗಿ ವಿವಿಧ ಸಂಸ್ಥೆಗಳ ಬುನಾದಿಗೆ ಪೈಯವರು ಕಾರಣೀಕರ್ತರು. ಕೆನರಾ ಹೈಸ್ಕೂಲು (1891), ಕೆನರಾ ಗರ್ಲ್ಸ್ ಹೈಸ್ಕೂಲು (1894), ಕೆನರಾ ಹಾಸ್ಟೆಲು, ಮಂಗಳೂರು ಯೂನಿಯನ್, ಹಿಂದುಳಿದ ವರ್ಗಗಳ ಅಭಿವೃದ್ಧಿ ಸಂಸ್ಥೆ ಮತ್ತು ಕೆನರಾ ಬ್ಯಾಂಕ್‌ನ್ನು ಸ್ಥಾಪಿಸಿ, ಶ್ರೀಯುತರು ಸಮಾಜದ ಏಳಿಗೆಗಾಗಿ ದುಡಿದು ಕೀರ್ತಿವಂತರಾದರು.

ಶ್ರೀ ಸುಬ್ರಾಯ ಪೈಯವರ ಜನ್ಮಸ್ಥಳ ಮುಲ್ಕಿಯು, ಭಾರತದ ಭೂಪಟದಲ್ಲಿಯೇ ತನ್ನದೇ ಆದ ಛಾಪನ್ನು ಒತ್ತಿಕೊಂಡು ಗುರುತಿಸಿ

ಕೊಂಡಿದೆ. ಪಶ್ಚಿಮ ಕರಾವಳಿಯ ರಾಷ್ಟ್ರೀಯ ಹೆದ್ದಾರಿ 17ರ ಮಂಗಳೂರು, ಉಡುಪಿಯ ಮಧ್ಯದಲ್ಲಿರುವುದೇ ಈ ಮೂಲಿಕಾಪುರ, ಒಳಲಂಕೆಯ ವೆಂಕಟರಮಣ ಮತ್ತು ನರಸಿಂಹದೇವರ ಹಾಗೂ ಬಪ್ಪನಾಡು ಶ್ರೀ ದುರ್ಗಾ ಪರಮೇಶ್ವರಿಯು ನೆಲೆಸಿರುವ ಪ್ರಸಿದ್ಧ ಪುಣ್ಯಕ್ಷೇತ್ರ. ಸುಮಾರು 800 ವರ್ಷಗಳ ಹಿಂದೆ 13ನೇ ಶತಮಾನದಲ್ಲಿ ಬಪ್ಪಬ್ಯಾರಿಯ ನೇತೃತ್ವದಲ್ಲಿ ಬಪ್ಪನಾಡು ದುರ್ಗಾಪರಮೇಶ್ವರಿ ಮಂದಿರ ಸ್ಥಾಪನೆಯಾಯಿತು. ದೇವಳದಲ್ಲಿ ವಿಶಿಷ್ಟವಾಗಿರುವ 'ಬಪ್ಪನಾಡು ಡೋಲು' ಭಕ್ತಾದಿಗಳ ಆಕರ್ಷಣೆಯ ಬಿಂದುವಾಗಿದೆ. ಕಾಶೀ ಮಠಾಧೀಶ ಶ್ರೀ ವಿಜಯೇಂದ್ರ ತೀರ್ಥಸ್ವಾಮಿಗಳಿಗೆ 16ನೇ ಶತಮಾನದಲ್ಲಿ ವಿಜಯನಗರ ಪತನವಾದ ನಂತರ ಈ ಪ್ರದೇಶದಲ್ಲಿ ಹಾದು ಹೋಗುತ್ತಿದ್ದಾಗ ಶ್ರೀ ನರಸಿಂಹ ದೇವರ ಮೂರು ವಿಗ್ರಹಗಳು ದೊರಕಿದವು. ಇವುಗಳಲ್ಲಿ ಒಂದು ವಿಗ್ರಹ ಶ್ರೀಉಗ್ರನರಸಿಂಹರದು. ಈ ವಿಗ್ರಹವನ್ನು ಸ್ವಾಮೀಜಿಯವರು ಎಲ್ಲೆಲ್ಲಿ ಪ್ರತಿಷ್ಠೆ ಮಾಡಬಯಸಿದರೂ ಆಗದೆ, ಕೊನೆಗೆ ಸ್ವಪ್ನ ನಿರ್ದೇಶನದಂತೆ ಅವರು ಒಳಲಂಕೆಯನ್ನು ಹುಡುಕಿಕೊಂಡು ಬಂದು ಇಲ್ಲಿ ಉಗ್ರನರಸಿಂಹ ದೇವರನ್ನು ಪ್ರತಿಷ್ಠಾಪಿಸಿದರು. ಶ್ರೀ ಅಮ್ಮೆಂಬಳ ಸುಬ್ಬರಾವ್ ಪೈ ಯವರಿಗೆ ಮುಲ್ಕಿಯ ಈ ದೇವಳದ ಬಗ್ಗೆ ಅಪರಿಮಿತ ಭಕ್ತಿ. ಅಭಯ ಪಡೆದು ಕಾರ್ಯ ಪ್ರಾರಂಭಿಸುವರೇ ದೇವರ ಗಂಧ ಪ್ರಸಾದ ಸ್ವೀಕರಿಸಿಯೇ ಮಾಡುತ್ತಿದ್ದರು. ದೇವರಲ್ಲಿ ಅಪಾರ ಶ್ರದ್ಧೆ, ನಂಬಿಕೆ ಇದ್ದುದರ ಪರಿಣಾಮ ವಾಗಿ ಅವರು ಅನೇಕ ಸಂಸ್ಥೆಗಳನ್ನು ಸ್ಥಾಪಿಸಲು ಕಾರಣವಾಯಿತು. ಜನರಲ್ಲಿ ವಿಭಿನ್ನ ರೀತಿಯ ಅಭಿಪ್ರಾಯ ಹಾಗೂ ಭ್ರಮೆಯಿದೆ, ಒಳಲಂಕೆ ನರಸಿಂಹ ದೇವರ ಅನುಗ್ರಹದಿಂದ ಹಾಗೂ ಮುಷ್ಠಿ ಹಣದಿಂದ ಕೆನರಾ ಬ್ಯಾಂಕಿನ ಸ್ಥಾಪನೆಯಾಯಿತೆಂದು ರಘುಪತಿ ಮಾಸ್ತರವರ ಅಂಬೋಣ. ಹಣತೆಯಿಂದ ಹಣತೆ ಹಚ್ಚುತ್ತಾ ಬೆಳಕು ಪಸರಿಸಿದಂತೆ, ಕೆನರಾ ಬ್ಯಾಂಕ್ ಕೂಡ ಒಂದೊಂದಾಗಿ ಹೆಚ್ಚುತ್ತಾ ದೇಶದ ಮೂಲೆ ಮೂಲೆಗಳಲ್ಲಿ ತನ್ನ ಶಾಖೆಯನ್ನು ತೆರೆದು ಜನರ ಹಿತಕ್ಕಾಗಿ ದುಡಿಯುತ್ತಿದೆ.

ಶ್ರೀಯುತ ಸುಬ್ಬರಾವ್ ಪೈಯವರು ಹುಟ್ಟಿದ ಸ್ಥಳವೂ ಶ್ರೀಧರ ಪದ್ಮನಾಭ ಕಾಮತ್‌ರವರ ಪರಿವಾರದ ಸ್ಥಳವಾಗಿದ್ದು, ಈ ಕುಟುಂಬದವರ ಉದಾರ ಕೊಡುಗೆಯಿಂದ, ಇಂದು ಈ ಸ್ಥಳದಲ್ಲಿ ಮುಲ್ಕಿ ಶಾಖೆಯ ಸುಂದರ ಕಟ್ಟಡ ನಿರ್ಮಾಣವಾಗಿದೆ.

ಕೆನರಾ ಬ್ಯಾಂಕ್ ಮುಲ್ಕಿ ಶಾಖೆಯು ಈ ಹಿಂದೆ ಮುಲ್ಕಿ ಲಲಿತಮಹಲ್ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು 1986ನೇ ಇಸವಿಯಲ್ಲಿ ಮುಲ್ಕಿಯ ಪಂಚಮಹಲ್ ರಸ್ತೆಯಲ್ಲಿರುವ ಮುಲ್ಕಿ ಸಭಾಗೃಹ ಸಮಿತಿಯ ಕಟ್ಟೋಣಕ್ಕೆ ಸ್ಥಳಾಂತರಗೊಂಡಿತ್ತು. ಈ ಕಾರ್ಯಕ್ರಮಕ್ಕೆ ಕಾಶೀಮಠಾಧೀಶರಾದ ಶ್ರೀಮದ್ ಸುಧೀಂದ್ರ ತೀರ್ಥ ಸ್ವಾಮೀಜಿಯವರು ಆಶೀರ್ವದಿಸಿ ಆಗಿನ ಎಕ್ಸ್‌ಕ್ಯುಟಿವ್ ಡೈರೆಕ್ಟರ್ ಹಾಗೂ ಮುಂದಿನ ಛೇರ್ಮೇನ್ ಆಗಿದ್ದಂತಹ ಎನ್.ಡಿ. ಪ್ರಭು ಇವರು ಉಪಸ್ಥಿತರಿದ್ದರು. ಆಗ ಮುಲ್ಕಿಯ ಕೆನರಾ ಬ್ಯಾಂಕ್ ಶಾಖೆಗೆ 50 ವರ್ಷ. ಮುಂದೆ 1996ರಲ್ಲಿ ಕೆನರಾ ಬ್ಯಾಂಕ್ ತನ್ನ 90ನೇ ವರ್ಷದ ಕಾರ್ಯಕ್ರಮವನ್ನು ನಡೆಸುವ ಸಮಯದಲ್ಲಿ ಸಭಾಗೃಹದ 2ನೇ ಅಂತಸ್ತಿನಲ್ಲಿ ಸುಂದರವಾದ ಸಭಾಂಗಣ. ಅಮ್ಮೆಂಬಳ ಸುಬ್ಬರಾವ್ ಪೈ ಸ್ಮಾರಕ ರಂಗಮಂಟಪ ಹಾಗೂ ಟಿ.ಪಿ. ಪೈ ಸ್ಮಾರಕ, ಬಾಲ್ಕನಿಯ ಉದ್ಘಾಟನೆಯನ್ನು ಆಗ ಛೇರ್ಮೇನ್ ಆಗಿದ್ದ ಜೆ.ಪಿ. ಶೆಟ್ಟಿ ಇವರ ಸಮ್ಮುಖದಲ್ಲಿ ನಡೆಯಿತು. ಈ ಸಭಾಂಗಣ ನಿರ್ಮಾಣದ ಸಮಯದಲ್ಲಿ ಕೆನರಾಬ್ಯಾಂಕಿನ ವಿವಿಧ ಶಾಖೆಯ ಉದ್ಯೋಗಿಗಳು ಹಾಗೂ ವಿಶೇಷ ಅಧಿಕಾರಿಗಳು ಅದ್ಭುತ ರೀತಿಯಲ್ಲಿ ಸ್ಪಂದಿಸಿ ಧನ ಸಹಾಯವನ್ನು ನೀಡಿದ್ದು ನಿಜಕ್ಕೂ ಶ್ಲಾಘನೀಯ.

ಸುಬ್ಬರಾವ್‌ರವರ ತಾಯಿ ವಿಧಿವಶರಾದ ಸಮಯದಲ್ಲಿ ಶ್ರೀಯುತರು ತಮ್ಮ ತಂದೆಯೊಂದಿಗೆ ಮಂಗಳೂರಿನ ಡೊಂಗರಕೇರಿಯಲ್ಲಿ ಬಂದು ನೆಲೆಸಿದರು. ಇದು ಈಗಿನ ವಸ್ತುಸಂಗ್ರಹಾಲಯ ಹಾಗೂ ಸಂಸ್ಥಾಪಕರ ಶಾಖೆಯಾಗಿದೆ.

ಶ್ರೀ ಅಮ್ಮೆಂಬಳ ಸುಬ್ಬರಾವ್‌ರವರು ಸ್ಥಾಪಿಸಿದಂತಹ ಅತ್ಯುನ್ನತ ಸಂಸ್ಥೆಗಳಲ್ಲಿ ಒಂದಾದ ಕೆನರಾ ಬ್ಯಾಂಕ್ ಇಂದು ದೇಶ ವಿದೇಶಗಳಲ್ಲಿ ಪ್ರಖ್ಯಾತಿ ಗಳಿಸಿದೆ. ಬ್ಯಾಂಕಿಂಗ್ ರಂಗದಲ್ಲಿ ಮುಂಚೂಣಿಯಲ್ಲಿದೆ. ಇತರ ಕೆನರಾ ಸಂಸ್ಥೆಗಳೂ ಕೂಡ ತಮ್ಮದೇ ಪ್ರಸಿದ್ಧಿ ಪಡೆದು ಸಮಾಜದಲ್ಲಿ ಗುರುತಿಸಿಕೊಂಡಿವೆ. ಕೆನರಾ ಬ್ಯಾಂಕಿನ ಜನ್ಮ ಶತಮಾನೋತ್ಸವದ ಈ ಶುಭಾವಸರದಲ್ಲಿ ಅಮ್ಮೆಂಬಳ ಸುಬ್ಬರಾವ್ ಪೈ ಹಾಗೂ ಅವರು ಸ್ಥಾಪಿಸಿದ ಬ್ಯಾಂಕ್ ಮತ್ತು ಇತರ ಸಂಸ್ಥೆಗಳ ಬಗ್ಗೆ ಆದಷ್ಟು ಮಾಹಿತಿ, ವಿಷಯಗಳನ್ನು ಕಲೆಹಾಕಿ ಈ ಕಿರುಹೊತ್ತಿಗೆಯನ್ನು ಹೊರತರಲು ಪ್ರಾಮಾಣಿಕ ಪ್ರಯತ್ನ ಮಾಡಿರುತ್ತೇನೆ.

ಈ ಸಂದರ್ಭದಲ್ಲಿ ಒಂದು ಬಹಳ ಮುಖ್ಯವಾದ ವಿಷಯವನ್ನು ತಿಳಿಸಲು ಅಪೇಕ್ಷೆ ಪಡುತ್ತೇನೆ. ಅಮ್ಮೆಂಬಳ ಸುಬ್ಬರಾವ್ ಪೈ ಮತ್ತು ಕಾಶೀಮಠಾಧೀಶರಾದ ಶ್ರೀಮದ್ ಭುವನೇಂದ್ರ ಸ್ವಾಮೀಜಿಯವರ ನಡುವೆ ಬಹಳ ಅನ್ಯೋನ್ಯವಾದ ಪ್ರೀತಿ ಮತ್ತು ವಿಶ್ವಾಸವಿತ್ತು. ಇದರಿಂದಾಗಿ ಅಮ್ಮೆಂಬಳ ಸುಬ್ಬರಾವ್ ಪೈಯವರು ಕೆನರಾ ಹೈಸ್ಕೂಲನ್ನು ಪ್ರಾರಂಭಿಸಲು ಸ್ವಾಮೀಜಿಯವರಿಂದ ಆಶೀರ್ವಾದ ಪಡೆಯಲು ಪತ್ರ ಬರೆದಾಗ ಸ್ವಾಮೀಜಿಯವರು ತಮ್ಮ ಬಳಿ ಇದ್ದ ಬಂಗಾರದ ಚೈನನ್ನು ಮತ್ತು ಪ್ರಸಾದವನ್ನು ಕಳುಹಿಸಿಕೊಟ್ಟು ಸುಬ್ಬರಾವ್ ಪೈಯವರನ್ನು ಪ್ರೋತ್ಸಾಹಿಸಿದ್ದರು. ಆದ ಕಾರಣ ಅವರ ನೆನಪಿಗೋಸ್ಕರ ಕೆನರಾ ಹೈಸ್ಕೂಲಿನಲ್ಲಿ "ಭುವನೇಂದ್ರ ಹಾಲ್"ನ್ನು ಕಟ್ಟಿಸಿದ್ದು ನಮಗೆಲ್ಲರಿಗೂ ತಿಳಿದ ವಿಷಯ ಇದಲ್ಲದೆ ಬಡ ಜನರಿಗೋಸ್ಕರ ಒಂದು ಬ್ಯಾಂಕನ್ನು ಪ್ರಾರಂಭಿಸಬೇಕೆಂದು ಪ್ರಪ್ರಥಮವಾಗಿ ಪೈಯವರಿಗೆ ಸಲಹೆ ನೀಡಿದ್ದು ಸ್ವಾಮೀಜಿಯವರೇ. ಆದ ಕಾರಣ ನಾನು ಈ ಕೃತಿಯನ್ನು ಭುವನೇಂದ್ರ ಸ್ವಾಮೀಜಿಯವರ ನೆನಪಿನ ಕಾಣಿಕೆಯಾಗಿ ಪ್ರಕಟಿಸುತ್ತಿದ್ದೇನೆ.

ಈ ಕೃತಿ ರಚನೆಯಲ್ಲಿ ನನಗೆ ಹಲವಾರು ಮಂದಿ ಸಹಾಯ ಮಾಡಿರುತ್ತಾರೆ. ಇದನ್ನು ನಾನು ಕನ್ನಡ ಇಂಗ್ಲೀಷ್ ಮತ್ತು ಹಿಂದಿ ಮೂರೂ ಭಾಷೆಗಳಲ್ಲಿ

ಪ್ರಕಟಿಸಿರುತ್ತೇನೆ. ಮುಖ್ಯವಾಗಿ ವಿಜಯ ಕಾಲೇಜಿನ ನಿವೃತ್ತ ಪ್ರಾಂಶುಪಾಲರೂ ಮತ್ತು ಹಿಂದಿ ಪ್ರಾಧ್ಯಾಪಕರೂ ಆದ ಪ್ರೊ. ಕೆ. ರಾಘವ ಭಟ್‌ರವರು ಇದನ್ನು ಸುಂದರವಾಗಿ ಹಿಂದಿಯಲ್ಲಿ ಅನುವಾದಿಸಿದ್ದಾರೆ ಮತ್ತು ಮೂರೂ ಭಾಷೆಗಳಲ್ಲಿ ಮುದ್ರಿತ ಪ್ರೂಫ್‌ಗಳನ್ನು ತಿದ್ದಿ ಸರಿಪಡಿಸಿ ಕೊಟ್ಟಿರುತ್ತಾರೆ. ಇವರಿಗೆ ಇನ್ನೊಬ್ಬ ಉಪನ್ಯಾಸಕ ಶ್ರೀ ಕೇಶವ ಗೌಡ ಇವರು ಸಹಕಾರ ನೀಡಿದ್ದಾರೆ. ಇದನ್ನು ಇಂಗ್ಲೀಷ್‌ನಲ್ಲಿ ಅನುವಾದಿಸುವಾಗ ನನ್ನ ಮಿತ್ರ ವಕೀಲ ಶ್ರೀ ವಿ. ಸತೀಶ್ ಕಾಮತ್ ಹಾಗೂ ಇಂಗ್ಲೀಷ್ ಪ್ರಾಧ್ಯಾಪಕ ಪ್ರೊ. ಹಯವದನ ಉಪಾಧ್ಯಾಯ ಇವರು ಸಹಕರಿಸಿರುತ್ತಾರೆ. ನನ್ನ ಧರ್ಮಪತ್ನಿ ಶ್ರೀಮತಿ ಶಾಂತಿ ಕುಡ್ವರು ಈ ಮೂರೂ ಕೃತಿಗಳನ್ನು ಬರೆಯುವಾಗ ನನ್ನೊಂದಿಗೆ ಸಹಕರಿಸಿರುತ್ತಾರೆ. ಈ ಕೃತಿಯ ಮುದ್ರಣವನ್ನು ಮಂಗಳೂರಿನ ಶಾರದಾ ಪ್ರೆಸ್‌ರವರು ಬಹಳ ಅಚ್ಚುಕಟ್ಟಾಗಿ ಮಾಡಿರುತ್ತಾರೆ. ಇವರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ. ಕನ್ನಡದಲ್ಲಿ ಮುನ್ನುಡಿಯನ್ನು ಕ್ಲಪ್ತ ಸಮಯದಲ್ಲಿ ಬರೆದು ಕೊಟ್ಟ ಶ್ರೀ ವಿ. ಪುಂಡಲೀಕ ಕಾಮತರಿಗೂ ಪ್ರಸ್ತಾವನೆಯನ್ನು ಬರೆದ ಡಾ। ಮೀರಾ ಕಾಮತ್‌ರಿಗೂ ನನ್ನ ಆತ್ಮೀಯ ವಂದನೆಗಳು. ಇದಲ್ಲದೆ ಇಂಗ್ಲೀಷ್ ರೂಪಾಂತರಕ್ಕೆ ಮುನ್ನುಡಿ ಬರೆದು ಕೊಟ್ಟ ವಿಜಯ ಕಾಲೇಜಿನ ನಿವೃತ್ತ ಪ್ರಾಂಶುಪಾಲ ಪ್ರೊ. ಸಾಮ್ಯುವೆಲ್ ಮೇಬೆನ್ ಮತ್ತು ಹಿಂದಿಯ ರೂಪಾಂತರಕ್ಕೆ ಮುನ್ನುಡಿ ಬರೆದು ಸಹಕರಿಸಿದ ಆತ್ಮೀಯ ಶ್ರೀ ಸೋಮಪ್ಪ ಸುವರ್ಣರಿಗೂ ಹಾರ್ದಿಕ ಕೃತಜ್ಞತೆ ಸಲ್ಲಿಸುತ್ತಿದ್ದೇನೆ. ಕೃತಿಗೆ ಮೆರುಗನ್ನು ನೀಡುವ ಛಾಯಾ ಚಿತ್ರಗಳನ್ನು ಅಂದವಾಗಿ ಸೆರೆ ಹಿಡಿದುಕೊಟ್ಟ ವೀಡಿಯೋಗ್ರಾಫರ್ ಸತೀಶ ಸುರತ್ಕಲ್ ಹಾಗೂ ಮುಖಪುಟ ಮತ್ತು ಒಳಗಿನ ಎಲ್ಲಾ ಚಿತ್ರಗಳನ್ನು ಸುಂದರವಾಗಿ ಮುದ್ರಿಸಿಕೊಟ್ಟ "ತೇಜ್‌ಗ್ರಾಫಿಕ್ಸ್" ಇವರಿಗೆ ನಾನು ಚಿರಋಣಿಯಾಗಿದ್ದೇನೆ.

ಈ ಕಿರುಹೊತ್ತಿಗೆಯನ್ನು ಒಳಲಂಕಾಧೀಶ ನರಸಿಂಹ ದೇವರಿಗೆ ಮನದಾಳದಿಂದ ಭಯಭಕ್ತಿಯಿಂದ ವಿನಮ್ರವಾಗಿ ಅರ್ಪಿಸುತ್ತೇನೆ. ನನ್ನ ಪ್ರಯತ್ನಕ್ಕೆ ತಾವೂ ಸದಾಕಾಲ ಆಶೀರ್ವದಿಸಿ ಇದರ ಸತ್ಪ್ರಯೋಜನ ಪಡೆಯಬೇಕಾಗಿ ನಮ್ರ ವಿನಂತಿ.

## ಅಮ್ಮೆಂಬಳ ಸುಬ್ಬರಾವ್ ಪೈ
## ಬದುಕಿನ ಮೊದಲ ಹೆಜ್ಜೆ-ಬಾಲ್ಯ ಮತ್ತು ವಿದ್ಯಾಭ್ಯಾಸ

ಶ್ರೀಯುತ ಅಮ್ಮೆಂಬಳ ಸುಬ್ಬರಾವ್ ಪೈಯವರು 1852ರ ಸಾಲಿನ ನವೆಂಬರ್ 19ರಂದು ಮುಲ್ಕಿಯ ಪ್ರಸಿದ್ಧ ಗ್ರಾಮ ಬಪ್ಪನಾಡುವಿನಲ್ಲಿರುವ ಒಂದು ಚಿಕ್ಕ ಮುಳಿಹಾಸಿನ ಮನೆಯಲ್ಲಿ ಜನಿಸಿದರು. ತಂದೆ ಉಪೇಂದ್ರ ಪೈ 1850ನೇ ಇಸವಿಯಲ್ಲಿ ಕಾಪುವಿನಿಂದ ಮುಲ್ಕಿಯಲ್ಲಿಬಂದು ನೆಲೆಸಿದರು. ಆಗ ಸುಬ್ರಾಯ ಪೈಯವರ ತಂದೆ ಶ್ರೀ ಉಪೇಂದ್ರ ಪೈಯವರು ಮುಲ್ಕಿಯ ಮುನ್ಸಿಪ್ ಕೋರ್ಟ್‌ನಲ್ಲಿ ವಕೀಲರಾಗಿದ್ದರು. ಸುಬ್ರಾಯ ಪೈಯವರ ತಾಯಿ ಇವರ 12ನೇ ವರ್ಷದಲ್ಲಿ (1864) ನಿಧನ ಹೊಂದಿರುವುದರಿಂದ ಇವರಿಗೆ ಶಿಕ್ಷಣ ಮುಂದವರಿಸುವರೆ ಇವರ ತಂದೆಯವರು ಮುಲ್ಕಿ ತ್ಯಜಿಸಿ, ಮಂಗಳೂರು ನಗರದ ಡೊಂಗರಕೇರಿ ಯಲ್ಲಿ ವಾಸಿಸತೊಡಗಿದರು. ಸುಬ್ರಾಯ ಪೈಯವರ ತಾಯಿ ತೀರಿ ಹೋದರೂ , ಪ್ರೀತಿ, ವಾತ್ಸಲ್ಯ ಕೊಟ್ಟು ತಾಯಿಯಂತೆ ತದನಂತರ ಸಾಕಿ ಸಲಹಿದವರು ಅವರ ಅತ್ತಿಗೆ ರುಕ್ಮಿಣಿಯವರು. ಇಬ್ಬರು ತಾಯಂದಿರ ಪ್ರೀತಿ ಪಡೆದ ಅದೃಷ್ಟವಂತ ಈ ಜಗತ್ತಿನಲ್ಲಿ ನಾನೇ ಧನ್ಯ ಎಂದು ಪೈಯುವರು ತನ್ನ ಆಪ್ತರಲ್ಲಿ ಹೇಳಿಕೊಳ್ಳುತ್ತಿದ್ದರು. ಪೈಯುವರನ್ನು ನೋಡಿಕೊಳ್ಳಲು ಅವರ ತಂದೆಯವರು ಒಂದು ಹೆಂಗಸನ್ನು [ಬಾಯಮ್ಮ] ನೇಮಿಸಿದ್ದರು. ಅವಳ ಪ್ರೀತಿಯ ದ್ಯೋತಕವಾಗಿ, ಅವಳ ಮುಂದಿನ ಜೀವನಕ್ಕೆ ಸಹಾಯ ಮಾಡಿ ಋಣ ತೀರಿಸಿಕೊಂಡ ವ್ಯಕ್ತಿತ್ವ ಶ್ರೀಯುತ ಸುಬ್ಬರಾವ್ ಪೈಯವರದ್ದು.

ಮೆಟ್ರಿಕ್ಯುಲೇಶನ್ ನಂತರ ಮಂಗಳೂರಿನ ಸರಕಾರಿ ಕಾಲೇಜಿ [ಈಗ ಯೂನಿವರ್ಸಿಟಿ ಕಾಲೇಜು]ನಲ್ಲಿ ವ್ಯಾಸಂಗ ಮಾಡಿ, ಬಿ.ಎ. ಪದವಿ ಪರೀಕ್ಷೆಯಲ್ಲಿ 2ನೇ ರಾಂಕ್ ಪಡೆದರು. ಮುಂದೆ 1870ರ ಸಾಲಿನಲ್ಲಿ ಮದ್ರಾಸಿಗೆ ತೆರಳಿ ಬಿ.ಎಲ್. ಪರೀಕ್ಷೆಯನ್ನು ಮುಗಿಸಿ, ಮದ್ರಾಸ

ಆಧಿಪತ್ಯದಲ್ಲಿ ಪ್ರಥಮ ಸ್ಥಾನ ಗಳಿಸಿದ ಕೀರ್ತಿ ಶ್ರೀ ಪೈಯವರದ್ದು. ತದನಂತರ, ಮಂಗಳೂರಿಗೆ ಬಂದು ನ್ಯಾಯಾಲಯದಲ್ಲಿ ವಕೀಲವೃತ್ತಿ ಪ್ರಾರಂಭಿಸಿದರು.

ಶ್ರೀಯುತ ಪೈಯವರ ಬಾಲ್ಯ ಜೀವನವೂ ಹೂವಿನ ಹಾಸಿಗೆಯಾಗಿರಲಿಲ್ಲ. ಸ್ವಾಭಿಮಾನದ ಪ್ರತೀಕವಾಗಿದ್ದ ಇವರ ತಂದೆಯವರಿಂದ, ಹಲವು ಜೀವನದ ಅನುಭವಗಳನ್ನು ಪಡೆದರು. ಮನುಷ್ಯನಿಗೆ ಮುಂಗೋಪವಿರಬಾರದು. ಸೌಜನ್ಯವಿದ್ದ ಮನುಷ್ಯ ಬದುಕಿನಲ್ಲಿ ಸಂಪೂರ್ಣ ಯಶಸ್ವಿಯಾಗುತ್ತಾನೆ, ಇಂದು ತೆಗಳಿದವರು, ನಾಳೆ ಹೊಗಳಿ ಬೆನ್ನು ತಟ್ಟುವ ಹಾಗೆ, ನಾವೂ ನಮ್ಮ ಭಾವನೆಗಳನ್ನು ತಿದ್ದಿ ತೀಡಿ ಬೆಳೆಸಬೇಕು ಎಂಬಂತಹ ಬದುಕಿನ ನೈಜ ಸತ್ಯವನ್ನು ಶ್ರೀಯುತ ಪೈಯವರು ತಮ್ಮ ಬಾಲ್ಯದ ಬದುಕಿನಲ್ಲಿ ತಿಳಿದು, ಅದರಂತೆಯೇ ತನ್ನ ಜೀವನ ರೂಪಿಸಿಕೊಂಡರು.

ಪೈಯವರು ಪ್ರಾಥಮಿಕ ಶಿಕ್ಷಣ ಮುಲ್ಕಿಯ ಏಕಮಾತ್ರ ಶಾಲೆಯಾದ 'ಐಗಳ' ಶಾಲೆಯಲ್ಲಿ ಮುಗಿಯಿತು. ಈ ಶಾಲೆಗೆ ಒಬ್ಬರೇ ಅಧ್ಯಾಪಕರು. ಅಂದಿನ ಶಿಕ್ಷಕರ ಪರಿಸ್ಥಿತಿ ಅಷ್ಟೇನು ಉತ್ತಮವಿರದೇ, ತನ್ನ ಕುಟುಂಬದ ಜೀವನ ನಡೆಸುವರೇ ವಿದ್ಯಾರ್ಥಿಗಳ ಗುಂಪು ಕಟ್ಟಿ, ಊರಿನ ಮನೆಮನೆಗೆ ಹೋಗಿ ಶಿಕ್ಷಕರು ವಂತಿಗೆ ಎತ್ತುವಷ್ಟು ಪರಿಸ್ಥಿತಿ ಇತ್ತು. ಶ್ರೀಯುತ ಪೈಯವರು ಮಾತ್ರ ಇದನ್ನು ಬಲವಾಗಿ ಖಂಡಿಸಿ ತನ್ನ ತಂದೆಯವರಲ್ಲಿ ಈ ಬಗ್ಗೆ ವಿರೋಧ ವ್ಯಕ್ತಪಡಿಸಿದರು. ಊರಿನ ಜನರು ಒಂದಾಗಿ ಹಣ ಸಂಗ್ರಹಿಸಿ ಶಿಕ್ಷಕರಿಗೆ ಸಹಕರಿಸಬೇಕೆಂಬ ಅಭಿಪ್ರಾಯ ಶ್ರೀ ಪೈಯವರದಾಗಿತ್ತು. ಶ್ರೀಯುತರ ಬಾಲ್ಯ ಜೀವನದ ಮಿತ್ರ ತಲಚೇರಿ ಜನಾರ್ಧನ ಶೆಣೈಯವರು. ತಾನು ವಕೀಲನಾದ ಮೇಲೂ, ತನ್ನ ಆಪ್ತಮಿತ್ರ, ತನ್ನ ಮನೆಯ ಪರಿಸರವನ್ನು ಸದಾಕಾಲ ನೆನಪಿಟ್ಟು, ಭೇಟಿ ಮಾಡುತ್ತಿದ್ದ ಸ್ನೇಹಜೀವಿ ಸುಬ್ರಾಯ ಪೈಯವರು. ಮದ್ರಾಸಿನಲ್ಲಿ ಕಾನೂನು ಪದವಿ ಪಡೆದ ಸಂದರ್ಭದಲ್ಲಿ ದೇವರ ಬಗ್ಗೆ ಅಪಾರ ನಂಬಿಕೆಯಿಟ್ಟ ಸುಬ್ಬರಾವ್ ಪೈಯವರು ತನ್ನ ದೈನಂದಿನ ಜೀವನದಲ್ಲಿ 3 ಬಾರಿ ಸಂಧ್ಯಾವಂದನೆ

ಮಾಡಿ, ದೇವರ ಪೂಜೆಗೆ ಬೆಳಿಗ್ಗಿನ ಹೆಚ್ಚಿನ ಸಮಯ ಮೀಸಲಿಟ್ಟ ಕಾರಣ, ಓದಿಗೆ ಅವಕಾಶ ಕಮ್ಮಿಯಾದದ್ದು ಮನಗಂಡು, ಅವರ ಮಿತ್ರ ಗೋಪಾಲರಾವರವರು ಈ ಬಗ್ಗೆ ಅವರಿಗೆ ಮನವರಿಕೆ ಮಾಡಿಕೊಟ್ಟರು. ನಿನ್ನ ತಾಯಿಯ ಅತಿ ದೊಡ್ಡ ಆಸೆ ನೀನು ಪ್ರಖ್ಯಾತ ವಕೀಲನಾಗಬೇಕು ಎಂಬ ವಿಷಯವನ್ನು ಅವರಿಗೆ ಮನದಟ್ಟಾಗುವಂತೆ ತಿಳಿಸಿ, ಓದಿನ ಕಡೆಗೆ ಗಮನಹರಿಸುವರೇ ಸಹಕರಿಸಿದರು.

## ವಕೀಲ ವೃತ್ತಿಯ ಪ್ರಾರಂಭ:- ಬೆಳವಣಿಗೆ

ಸುಬ್ಬರಾವ್ ಪೈಯವರು ಪರೀಕ್ಷೆಗಳಲ್ಲಿ ಬುದ್ಧಿವಂತ ಎನ್ನುವುದಕ್ಕೆ ಎರಡು ಮಾತಿಲ್ಲ. ಅವರಿಗೆ ದೊರಕಿದ ಚಿನ್ನದ ಪದಕಗಳೇ ಇದಕ್ಕೆ ಸಾಕ್ಷಿ. ಬೆಳೆಯ ಸಿರಿ ಮೊಳಕೆಯಲ್ಲಿ ಎಂಬ ಗಾದೆ ಮಾತಿನಂತೆ, ವಕೀಲ ವೃತ್ತಿಯಲ್ಲಿಯೂ ಇವರದ್ದು ಎತ್ತಿದ ಕೈ. ನ್ಯಾಯಾಲಯದಲ್ಲಿ ವಾದ ಮಂಡಿಸುವಾಗ, ಹೊರಗೆ ಇರುವ ಕಕ್ಷಿಗಾರರು ಕೂಡಾ ಮಂತ್ರ ಮುಗ್ಧರಾಗಿ ಆಲಿಸುತ್ತಿದ್ದರು. ಕ್ರಿಮಿನಲ್ ಕೇಸು, ಜಾಮೀನು ಅರ್ಜಿಗಳಲ್ಲಿ ವಕೀಲರಾಗಿದ್ದರೆ ಹಣದ ಸುರಿಮಳೆಯಾಗುತ್ತಿದ್ದರೂ, ಪೈಯವರು ಇದಕ್ಕೆ ವಿರುದ್ಧ. ಕೇವಲ ಸಿವಿಲ್ ವ್ಯಾಜ್ಯಗಳಲ್ಲಿ ಮಾತ್ರ ವಕಾಲತು ಮಾಡುತ್ತಿದ್ದರು ಶ್ರೀಯುತ ಪೈಯವರು. ತನ್ನ ಸಹ ಸದಸ್ಯರೊಂದಿಗೆ ಉತ್ತಮ ಸಂಬಂಧವಿರಿಸಿ ಸ್ನೇಹಮಯಿಯೆಂದು ಕೂಡಾ ಸಾಧಿಸಿದರು. ಭಾಷೆ ಬಲ್ಲವನಿಗೆ ಜ್ಞಾನದ ಹಸಿವು ಎಂಬ ಮಾತಿನಂತೆ ಕೊಂಕಣಿ, ಕನ್ನಡ, ಇಂಗ್ಲೀಷ್, ತುಳು, ಮತ್ತು ತಮಿಳು ಭಾಷೆಗಳನ್ನು ಸುಲಲಿತವಾಗಿ ಅರ್ಥೈಸಿ ಮಾತನಾಡುತ್ತಿದ್ದರು.

ವಕೀಲರಿಗೆ ಮುಖ್ಯವಾದದ್ದು ಕೇಸಿಗೆ ಸಂಬಂಧಪಟ್ಟ ಕಾನೂನಿನ ಅರಿವು ಹಾಗೂ ಪ್ರಚಲಿತ ತೀರ್ಪಿನ ಜ್ಞಾನ. ವಿವಿಧ ತೀರ್ಪಿನ ಪುಸ್ತಕಗಳ ಶೇಖರಣೆ ಮಾಡಿ, ಮೊಕದ್ದಮೆ ಬಗ್ಗೆ ಪೂರ್ತಿ ತಿಳಿದು ಶ್ರೀಯುತ ಪೈಯವರು ವಾದ ಮಾಡಲು ಪ್ರಾರಂಭಿಸಿದಾಗ ಸೋಲು ಅಥವಾ ಅಪವಾದ ಎಂಬ ಪದವೇ ಇರುತ್ತಿರಲಿಲ್ಲ. ಇವರು ವಕೀಲ ಶುಲ್ಕದ

ಬಗ್ಗೆ ಹೆಚ್ಚು ಆಸೆಯಿರಿಸದೆ, ಕಕ್ಷಿಗಾರರ ಹಿತಕ್ಕಾಗಿ ಸೇವಾನಿರತರಾಗಿದ್ದರು. ಅವರು ವಕೀಲರಾಗಿರುವಾಗ ಎಂದೆಂದಿಗೂ ಸುಳ್ಳು ಮೊಕದ್ದಮೆಗಳನ್ನು ಹಣದ ಆಸೆಗೆ ಪಡಕೊಳ್ಳಲಿಲ್ಲ. ಸತ್ಯ, ನ್ಯಾಯಕ್ಕಾಗಿ ಹೋರಾಡಿದ ಮಹಾನ್ ನ್ಯಾಯವಾದಿಗಳು ಶ್ರೀಯುತರು. ಕೋರ್ಟಿನಲ್ಲಿ ಮೊಕದ್ದಮೆ ಮಾಡುವ ಬದಲು ರಾಜಿಪಂಚಾಯಿತಿಯಿಂದ ತೀರ್ಮಾನ ಮಾಡಿ ಕಳುಹಿಸು ತ್ತಿದ್ದರು.ವ್ಯಾಜ್ಯ ನ್ಯಾಯಾಲಯಕ್ಕೆ ದಾಖಲಾದ ನಂತರವೂ ಎರಡು ಕಡೆಯವರ ವಂಶಪಾರಂಪರ್ಯ ವೈಮನಸ್ಸು ಉದ್ಭವಗೊಂಡು ಜನರಲ್ಲಿ ಪ್ರೀತಿ ಇಲ್ಲದೆ ದ್ವೇಷ ಅಧಿಕವಾಗುತ್ತ ಬರುತ್ತದೆಂದು ಹೇಳಿ, ರಾಜಿ ಪಂಚಾಯತಿ ಮಾಡುತ್ತಿದ್ದರು.

ಸ್ನೇಹಿತರನ್ನು ತುಂಬಾ ಅನ್ಯೋನ್ಯತೆಯಿಂದ ಕಾಣುತ್ತಿದ್ದ ಶ್ರೀ ಪೈಯವರು ಒಮ್ಮೆ ನ್ಯಾಯಾಲಯದಿಂದ ಬರುತ್ತಿರುವಾಗ ಒಂದು ಮನೆಯಿಂದ ಹೆಂಗಸರ ಹಾಗೂ ಮಕ್ಕಳ ರೋದನ ಕೇಳಿ, ವಿಚಾರ ತಿಳಿದುಕೊಂಡಾಗ ಆಮೀನನು ಜಪ್ತಿ ಮಾಡುತ್ತಾರೆ ಎಂಬ ಅರಿವಾಗಿ ಗುಟ್ಟಾಗಿ ಒಂದು ಲಕೋಟೆಯಲ್ಲಿ ರೂಪಾಯಿ 250ನ್ನು ಇರಿಸಿ, ಆ ಮನೆಯಲ್ಲಿ ಬಿಸಾಕಿ ಹೊರಟು ಹೋದರು. ಮನೆಯ ಮಾಲಿಕ ಈ ಲಕೋಟೆ ಬಿಡಿಸಿ ನೋಡಿ ಆ ಹಣವನ್ನು ಆಮೀನರಿಗೆ ನೀಡಿ ಜಪ್ತಿ ರದ್ದು ಪಡಿಸಿಕೊಂಡರು. ತದನಂತರ ಮನೆಯವರಿಗೆ ಈ ಉಪಕಾರ ಶ್ರೀ ಸುಬ್ರಾಯ ಪೈಯವರೇ ಮಾಡಿದ್ದು ಎಂದು ಅರಿವಾಗಿ, ಮನೆಯವರೆಲ್ಲರೂ ಪೈಗಳ ಮನೆಗೆ ತೆರಳಿ ಅವರ ಪಾದಸ್ಪರ್ಶ ಮಾಡಿದ್ದು ಅವಿಸ್ಮರಣೀಯ ನೋಟ. ಅಂತಹಾ ಕೊಡುಗೈ ದಾನಿ ಶ್ರೀ ಪೈಗಳು. ಎಡ ಕೈಯಿಂದ ಕೊಟ್ಟದ್ದು ಬಲ ಕೈಗೆ ಗೊತ್ತಾಗಬಾರದೆಂಬ ದಾನಗುಣ ಉಳ್ಳ ಧೀಮಂತ ವ್ಯಕ್ತಿತ್ವ ಇವರದು.

ಪೈಯವರ ಜೀವನದ ಕಹಿಸಂಗತಿ ಎಂದರೆ ಮಂಗಳೂರಿನಲ್ಲಿ ಕ್ಲಬ್‌ನ ಸ್ಥಾಪನೆ ಮಾಡಿದಾಗ ಸದಸ್ಯರ ಅಸಹಕಾರ. ಮದ್ರಾಸಿನಲ್ಲಿರುವಾಗ ತಾವೂ ಕ್ಲಬ್ ಸದಸ್ಯರಾಗಿ ಪಡೆದುಕೊಂಡ ಅನುಭವವನ್ನು ಮನಗೊಂಡು, ಮಂಗಳೂರಿನಲ್ಲಿಯೂ ಒಂದು ಕ್ಲಬ್ಬನ್ನು ಸ್ಥಾಪಿಸಿ ಗ್ರಂಥಾಲಯಕ್ಕೆ

ತಮ್ಮ ಅಮೂಲ್ಯವಾದ ಪುಸ್ತಕಗಳನ್ನು ಉದಾರವಾಗಿ ನೀಡಿದರು. ಆದರೆ ಒಂದೇ ವರ್ಷದಲ್ಲಿ ಸದಸ್ಯರ ಅಸಹಕಾರದಿಂದ ಕ್ಲಬ್ ಮುಚ್ಚಿದ್ದು ಮಾತ್ರವಲ್ಲದೇ ಪುಸ್ತಕವೂ ಗ್ರಂಥಾಲಯದಿಂದ ಕಣ್ಮರೆಯಾಗಿದ್ದು ಒಂದು ದೊಡ್ಡ ದುರಂತ.

## ವಿದ್ಯಾಸಂಸ್ಥೆಗಳ ಸ್ಥಾಪನೆ

ಅಜ್ಞಾನದಂಥ ದೊಡ್ಡ ಶತ್ರು ಬೇರೊಂದಿಲ್ಲ ಮನುಷ್ಯನ ಅಪಾರವಾದ ವ್ಯಕ್ತಿತ್ವವನ್ನೇ ಈ ಅಜ್ಞಾನ ನುಂಗಿಬಿಡುತ್ತದೆ. ಜ್ಞಾನದ ಸುಧಾರಣೆ ಆಗದೆ ದೇಶದ ಸುಧಾರಣೆಯಾಗುವುದು ಕಷ್ಟ. ಅಜ್ಞಾನ ಮತ್ತು ಅನರಕ್ಷರತೆ ತುಂಬಿರುವುದಕ್ಕೆ ವಿದೇಶಿಯರು ನಮ್ಮದೇಶವನ್ನು ಲೂಟಿ ಮಾಡಲು ಕಾರಣ. ಬರೇ ಸಾವಿರ ಸಾವಿರ ವಿದೇಶಿಯರು ಕೋಟಿ ಭಾರತೀಯರನ್ನು ತಮ್ಮ ಮುಷ್ಟಿಯಲ್ಲಿಟ್ಟಿರುವುದಕ್ಕಿಂತ ದೊಡ್ಡ ಅಪಮಾನ ಇನ್ನೇನಿದೆ. ನಮ್ಮ ಜನರಿಗೆ ಶಿಕ್ಷಣದ ಅರಿವಿದ್ದರೆ ಹೀಗಾಗುತ್ತಿರಲಿಲ್ಲವೆಂದು ಮನಗಂಡು ಅವರು ಶಿಕ್ಷಣ ಸಂಸ್ಥೆ ಸ್ಥಾಪನೆ ಮಾಡಲು ತೀರ್ಮಾನಿಸಿದರು. ಇಡೀ ದೇಶವನ್ನು ಸುಧಾರಣೆ ಮಾಡುವುದು ಕಷ್ಟವಾದರೂ, ಕೊನೆಪಕ್ಷ ಮಂಗಳೂರು ಹಾಗೂ ಆಸುಪಾಸಿನ ನಗರ, ಹಳ್ಳಿಗಳನ್ನು ಈ ನಿಟ್ಟಿನಲ್ಲಿ ಸುಧಾರಣೆ ಮಾಡಲು ಯೋಚಿಸಿದರು.

ಇದರ ಫಲವೇ ಮಂಗಳೂರು ಕೆನರಾ ಹೈಸ್ಕೂಲಿನ ಸ್ಥಾಪನೆ. ಶ್ರೀ ಪೈಯವರು ಮದ್ರಾಸಿನ ವಕೀಲರ ಕೈಕೆಳಗೆ ಕೆಲಸ ಮಾಡುತ್ತಿದ್ದ ಸಮಯ, ಪೈ ಹಾಗೂ ಅವರ ಸ್ನೇಹಿತರು ಮಂಗಳೂರಿನಲ್ಲಿ ಹೈಸ್ಕೂಲು ಪ್ರಾರಂಭಿಸುವರೇ ನಿರ್ಧಾರ ತಳೆದರು. ಮದ್ರಾಸಿನಲ್ಲಿ ಆಗಿನ ಕೆನರಾ ಲಾಡ್ಜ್‌ನಲ್ಲಿ ನೆಲೆಸಿದ್ದ ಅವರ ಮಿತ್ರರಾದ ಯು. ಶ್ರೀನಿವಾಸ ರಾವ್, ಬಿ. ಪದ್ಮನಾಭ ಬಾಳಿಗ, ಬಿ. ವಾಮನ ಬಾಳಿಗ ಮತ್ತು ಅರ್ಕುಳ ವಾಸುದೇವರಾವ್‌ರವರು ಸಮಲೋಚಿಸಿ ಮಂಗಳೂರಿನಲ್ಲಿ ಕೆನರಾ ಹೈಸ್ಕೂಲನ್ನು ಪ್ರಾರಂಭಿಸಿಯೇಬಿಟ್ಟರು. ಈ ಮಿತ್ರರೇ ಹೊಸದರಲ್ಲಿ ಶಾಲೆಯ ಶಿಕ್ಷಕರಾಗಿ ನಿಷ್ಠೆಯಿಂದ ದುಡಿದರು. ಶಾಲೆಯ ಮಾನ್ಯತೆ ಬಗ್ಗೆ

ಸಾಕಷ್ಟು ಸಮಸ್ಯೆ ಎದುರಿಸಿದರು. ಪ್ರಾರಂಭದಲ್ಲಿ ಕೊಡಿಯಾಲ್‌ಬೈಲ್‌ನ ಚರ್ಚ್ ಎದುರುಗಡೆಯ ಕಟ್ಟಡವನ್ನು ಬಾಡಿಗೆಗೆ ಪಡೆದು ಶಾಲೆ ಆರಂಭಿಸಲಾಯಿತು. ತದನಂತರ ಡೊಂಗರಕೇರಿ ಮಾರ್ಗದ ಪಕ್ಕದಲ್ಲಿ ವಿಶಾಲವಾದ ಜಾಗದಲ್ಲಿ ಶಾಲೆಯ ಹೊಸ ಕಟ್ಟಡದ ನಿರ್ಮಾಣವಾಗಿ ಸ್ಥಳಾಂತರಗೊಂಡಿತು. ಇಂದು ಈ ಸಂಸ್ಥೆ ಮಂಗಳೂರು ನಗರದ ಕೇಂದ್ರ ಭಾಗದ 22 ಎಕರೆ ಜಮೀನಿನಲ್ಲಿ ಹರಡಿಕೊಂಡಿದೆ. ಈ ಕೆನರಾ ಹೈಸ್ಕೂಲ್ ಇಡೀ ಮದ್ರಾಸ್ ಅಧಿಪತ್ಯದಲ್ಲೇ ಬಹಳ ಹೆಸರುವಾಸಿ ಶಾಲೆ. ಇಲ್ಲಿ ಕಲಿತವರು ತುಂಬಾ ಹೆಸರು ಕೀರ್ತಿ ಗಳಿಸಿದವರಾಗಿರುತ್ತಾರೆ. ಈ ಶಾಲೆ ಪ್ರಾರಂಭಿಸುವರೇ ತನಗೆ ಆಶೀರ್ವಾದ, ಧೈರ್ಯ ನೀಡಿ ಹರಸಿದ ಶ್ರೀಮದ್ ಭುವನೇಂದ್ರ ತೀರ್ಥ ಸ್ವಾಮೀಜಿಯವರ ಚಿರಸ್ಮರಣೆಗಾಗಿ ಒಂದು ಸಭಾಭವನ ನಿರ್ಮಿಸಿ, ಅದಕ್ಕೆ ಶ್ರೀ ಭುವನೇಂದ್ರ ಹಾಲ್ (ಸಭಾ ಗೃಹ) ಎಂದು ನಾಮಕರಣ ಮಾಡಿರುತ್ತಾರೆ. ಈ ಸಭಾಭವನದಲ್ಲಿ ವಿವಾಹ ಇತ್ಯಾದಿ ಮಂಗಳ ಕಾರ್ಯಗಳು ನೆರವೇರುತ್ತಾ ಇದ್ದು ಕೆನರಾ ಸಂಸ್ಥೆಯ ಹೆಸರನ್ನು ಕೀರ್ತಿ ಶಿಖರಕ್ಕೆ ಏರಿಸಿದೆ.

ಪ್ರಾರಂಭದಲ್ಲಿ ಎ. ವಾಸುದೇವರಾಯರವರು ಶಾಲೆಯ ಮುಖ್ಯೋಪಾಧ್ಯಾಯರಾದರು. ಅಧ್ಯಾಪಕರೆಲ್ಲರೂ ಸೇರಿ ಶಾಲೆಯ ಅಭಿವೃದ್ಧಿ ಹಾಗೂ ಉನ್ನತಿಗಾಗಿ ಅಹೋರಾತ್ರಿ ದುಡಿದರು. ಮುಂದಕ್ಕೆ ಹೆಣ್ಣು ಮಕ್ಕಳ ಕೆನರಾ ಹೈಸ್ಕೂಲು ಪ್ರಾರಂಭವಾದಾಗ ಈ ಶಾಲೆಯ ಅಧ್ಯಾಪಕರೆಲ್ಲರೂ ತಮ್ಮ ಸಂಬಳದ ಒಂದಂಶವನ್ನು ಈ ಹೆಣ್ಮಕ್ಕಳ ಶಾಲೆಯ ಅಭಿವೃದ್ಧಿಗಾಗಿ ನೀಡಿ ಸಮಾಜ ಸೇವೆಗೆ ತಾವೇ ಸಹಾಯಗೈದರು.

ನಾವು ಮಾಡುವ ಕೆಲಸ ದೇವರ 'ಕೆಲಸ'. ನಾವು ಮಧ್ಯವರ್ತಿಗಳು ಮಾತ್ರ, ನಮ್ಮ ಮೂಲಕ ದೇವರೇ ಇದನ್ನೆಲ್ಲಾ ಮಾಡಿಸಿದ್ದಾನೆ ಎಂಬ ಭಾವನೆಯಿಂದ ಮಾಡಿದ ಶ್ರೀ ಪೈಗಳ ಹಾಗೂ ಅಧ್ಯಾಪಕರ ಕೆಲಸಕ್ಕೆ ಉತ್ತಮ ಫಲ ಬಂದೇ ಬಿಟ್ಟಿತು. 1893ರ ಎಸ್.ಎಸ್.ಎಲ್.ಸಿ. ಅಂತಿಮ ಪರೀಕ್ಷೆಯಲ್ಲಿ ಈ ಶಾಲೆಯ ಮೂವರು ವಿದ್ಯಾರ್ಥಿಗಳು ಮದ್ರಾಸ

ಪ್ರಾಂತ್ಯದಲ್ಲಿಯೇ ಮೊದಲ ಎರಡು ರ್‍ಯಾಂಕ್‌ಗಳನ್ನು ಬಾಚಿ ಇತಿಹಾಸ ಸೃಷ್ಟಿಸಿದರು. ಶ್ರೀ ಸುಬ್ಬರಾವ್ ಪೈಯವರ ಅಣ್ಣ ವೆಂಕಟರಮಣ ಪೈಯವರ ಮಗ ಮತ್ತು ಮುಲ್ಕಿ ನರಸಿಂಹ ರಾವ್ ಮೊದಲ ರ್‍ಯಾಂಕನ್ನು ಹಂಚಿ ಶಾಲೆಗೆ ಕೀರ್ತಿ ತಂದರು. ದ್ವಿತೀಯ ರ್‍ಯಾಂಕನ್ನು ಉದ್ಯಾವರ ರಾಮರಾವ್ ಪಡೆದರು.

ಫಲಿತಾಂಶ ಕಂಡು ಪೈ ಹಾಗೂ ಅವರ ಅಧ್ಯಾಪಕ ತಂಡ ಸಂತೋಷ ಸಂಭ್ರಮದಿಂದ ವಿಸ್ಮಯ ಭೂತರಾದರು. ಪ್ರಥಮ ವರ್ಷದಲ್ಲಿಯೇ ತಾವು ಎಣಿಸಿದಕ್ಕಿಂತ ಅದ್ಭುತ ಫಲಿತಾಂಶ ಈ ರೀತಿಯಲ್ಲಿ ದೊರೆಯುತ್ತದೆ ಎಂದು ಕನಸು ಮನಸಿನಲ್ಲಿಯೂ ತಾವು ಎಣಿಸಿರಲಿಲ್ಲ ಎಂಬ ಭಾವನೆಯನ್ನು ಅಮ್ಮೆಂಬಾಳ್ ಸುಬ್ರಾಯಪೈಯವರು ತಮ್ಮ ಸ್ನೇಹಿತರೊಂದಿಗೆ ಹೇಳುತ್ತಿದ್ದರು.

1893ರ ಸಾಲಿನಲ್ಲಿ ಮದ್ರಾಸು ಸರಕಾರವು ಒಂದು ಹೊಸ ನಿಯಮ ಜಾರಿಗೆ ತಂದಿತು. ಶಾಲೆಯ ಮೇಲ್ವಿಚಾರಣೆ ನಡೆಸುವರೇ ಒಂದು ಟ್ರಸ್ಟನ್ನು ರಚಿಸುವುದು ಅವಶ್ಯ ಎಂಬ ನಿಯಮ ಮಾಡಲಾಯಿತು. ಆ ಪ್ರಕಾರ ಒಂದು ಟ್ರಸ್ಟನ್ನು ರಚಿಸಿ ಈ ಕೆಳಗೆ ವಿವರಿಸಿದ ಪ್ರಕಾರ ಟ್ರಸ್ಟಿಗಳ ಹೆಸರನ್ನು ಕಳುಹಿಸಲಾಯಿತು.

1. ಶ್ರೀ ಎಮ್. ರಾಮಚಂದ್ರಯ್ಯ
2. ಶ್ರೀ ಎ. ಸುಬ್ಬರಾವ್ ಪೈ
3. ಶ್ರೀ ಕೆ.ಪಿ. ರಾಮರಾವ್
4. ಶ್ರೀ ಅಡಿಗೆ ಶ್ರೀನಿವಾಸ ರಾವ್
5. ಶ್ರೀ ಬಾಬಾ ಪೈ

ಟ್ರಸ್ಟಗಳ ಕ್ರಮಾಂಕದಲ್ಲಿ ಶ್ರೀ ಪೈಗಳ ಹೆಸರು ಎರಡನೆಯದ್ದು ನೋಡಿದಾಗ, ಸ್ವಲ್ಪ ಆಶ್ಚರ್ಯವಾಗಬಹುದು. ಶ್ರೀ ರಾಮಚಂದ್ರಯ್ಯನವರು ಈ ಕೆಲಸಕ್ಕೆ ಯಾವುದೇ ಒಂದು ಸಂಭಾವನೆಯನ್ನು ಬಯಸದೆ ದುಡಿದ

ವ್ಯಕ್ತಿ. ಅಲ್ಲದೆ ಇವರು ಪೈಯವರ ತಂದೆಯ ಆಪ್ತಮಿತ್ರರೂ ಆಗಿದ್ದರು. ಶ್ರೀ ಪೈ ಯವರಿಗೆ ಇವರ ಮೇಲೆ ಅಪಾರ ಗೌರವ. ಪೈಗಳ ಮಾತಿನಲ್ಲಿಯೇ ಹೇಳುವುದಾದರೆ ಈ ಮಹಾನುಭಾವರ ಬೆನ್ನು ಕಂಡರೂ ನಾನು ಅವರಿಗೆ ವಂದಿಸುತ್ತೇನೆ. ಅವರು ಅಂತಹ ಶ್ರೇಷ್ಠ ವ್ಯಕ್ತಿ ಎಂದು ಯಾರೂ ಊಹಿಸಲಾಸಾಧ್ಯ. ಅವರು ನಮ್ಮ ಇಡೀ ಸಮಾಜದ 'ಭೀಷ್ಮ ಪಿತಾಮಹರು' ಎಂದು ಪೈಯವರು ಹೇಳುತ್ತಿದ್ದರು.

## ಹೆಣ್ಮಕ್ಕಳ ಶಾಲೆ

ಸಮಾಜದ ಸಂಪೂರ್ಣ ಅಬಿವೃದ್ಧಿ ಹಾಗೂ ಏಳಿಗೆಯಾಗುವುದು ಪುರುಷರು ಸ್ತ್ರೀಯರು ಸಮಾನತೆಯಿಂದ ಇದ್ದಾಗ ಮಾತ್ರ. ಸ್ತ್ರೀ ಸಮಾನತೆಗೆ ಬರಲು ವಿದ್ಯೆಯು ಅತಿ ಮುಖ್ಯ ಹಾಗೂ ಅಗತ್ಯ. ಈ ವಿಷಯ ಮನಗೊಂಡು ಶ್ರೀ ಸುಬ್ಬರಾವ್ ಪೈಯವರು ಹೆಣ್ಮಕ್ಕಳ ಶಾಲೆ ಪ್ರಾರಂಭಿಸುವರೇ ನಿರ್ಧರಿಸಿ ಮಂಗಳೂರಿನಲ್ಲಿ ಒಂದು ಸಭೆ ಕರೆದರು. ಶ್ರೀ ಕೆ. ಪಿ. ಅಚ್ಯುತಯ್ಯ, ಎಮ್. ಮುಕುಂದರಾವ್, ಎಮ್. ಗೋಪಾಲರಾವ್ ಹಾಗೂ ಜಿ. ಕೃಷ್ಣ ಪ್ರಭು ಇದ್ದು ಜನರು ಮಾತ್ರ ಪೈಯವರಿಗೆ ಹೆಣ್ಮಕ್ಕಳ ಶಾಲೆ ಸ್ಥಾಪಿಸುವರೇ ತಮ್ಮ ಬೆಂಬಲ ವ್ಯಕ್ತಪಡಿಸಿದರು. ಸಭೆಯಲ್ಲಿ ಕೆಲವು ವ್ಯಕ್ತಿಗಳು ಹೆಣ್ಮಕ್ಕಳ ಶಾಲೆಯ ಅವಶ್ಯಕತೆಯೇ ಇಲ್ಲ ಎಂದು ವಾದ ಮಂಡನೆ ಮಾಡಿದರು. ಶ್ರೀ ಪೈಯವರು, ಹೆಣ್ಣು ಮಕ್ಕಳ ಶಿಕ್ಷಣದ ಮಹತ್ವದ ಬಗ್ಗೆ ಸಭೆಗೆ ಅತ್ಯುತ್ತಮ ರೀತಿಯಲ್ಲಿ ಮನದಟ್ಟು ಮಾಡಿ, ಎಲ್ಲರ ಮೆಚ್ಚುಗೆ ಹಾಗೂ ಸಹಕಾರ ಗಿಟ್ಟಿಸಿಕೊಂಡರು. 1894ರ ಸಾಲಿನ ಜೂನ್ 7ರಂದು ಮಂಗಳೂರಿನಲ್ಲಿ ಹೆಣ್ಣು ಮಕ್ಕಳ ಕೆನರಾ ಹೈಸ್ಕೂಲ್ ಸ್ಥಾಪನೆಯಾಯಿತು. ಶ್ರೀಯುತ ಪೈಯವರು ಶಾಲೆಯ ಕಟ್ಟೋಣಕ್ಕಾಗಿ ರೂಪಾಯಿ 1,300 ದಾನ ನೀಡಿದರು. ಶಾಲೆಯ ಲೆಕ್ಕಪತ್ರದಲ್ಲಿ ಈ ಬಗ್ಗೆ ಉಲ್ಲೇಖ ಇರುತ್ತದೆ. ತದನಂತರ ಅವಶ್ಯಕತೆ ಬಂದಾಗ ಶ್ರೀ ಪೈಯವರು ನೀಡಿದ ಹಣಕ್ಕೆ ಲೆಕ್ಕವೇ ಇಲ್ಲ. ಅಧ್ಯಾಪಕರ ಸಂಬಳಕ್ಕಾಗಿ ಶ್ರೀ ಪೈಯವರು ಒಂದು ಯೋಜನೆ ಮಾಡಿದರು. ಪ್ರತಿದಿನ ಸಮಾಜದ ಹೆಣ್ಣುಮಗಳು ಮನೆಯಲ್ಲಿ

ಒಂದು ಮುಷ್ಠಿ ಅಕ್ಕಿ ತೆಗೆದಿರಿಸಿ ಶನಿವಾರ ಸಂಜೆ ಶಾಲೆಯ ಜವಾನ ಬಂದಾಗ ನೀಡಬೇಕು. ಒಟ್ಟಾದ ಈ ಅಕ್ಕಿಯನ್ನು ತಿಂಗಳ ಕೊನೆಗೆ ಮಾರಿ ಬಂದ ಹಣದಿಂದ ಅಧ್ಯಾಪಕರ ಸಂಬಳಕ್ಕೆ ಉಪಯೋಗಿಸಬೇಕು ಎಂಬ ಪೈಗಳ ಯೋಜನೆ ಮೊದಮೊದಲು ಯಾರಿಗೂ ಹಿಡಿಸಲಿಲ್ಲ. ಅಕ್ಕಿ ಮಾರಿ ಬಂದ ತಿಂಗಳ ಮೊತ್ತ ರೂಪಾಯಿ 150ನ್ನು ಅಧ್ಯಾಪಕರ ಸಂಬಳ ನೀಡಲು ಉಪಯೋಗಿಸಲಾಯಿತು. ಪೈಯವರ ಜೀವಮಾನ ಕಾಲದವರೆಗೆ ಈ ಯೋಜನೆ ಯಶಸ್ವಿಯಾಗಿ ನೆರವೇರಿದರೂ, ತದನಂತರ ಯೋಜನೆಯ ಬದಲಾವಣೆಯಿಂದ ಮೊತ್ತದ ಸಂಗ್ರಹಣೆ ಕಡಿಮೆಯಾಯಿತು.

ಶ್ರೀ ಪೈ ಯವರಿಗೆ ಸಂಸ್ಕೃತ ಭಾಷೆಯೆಂದರೆ ಪಂಚಪ್ರಾಣ. ಅವರ ಹಿರಿಯ ಅಣ್ಣಂದಿರೂ ಸಂಸ್ಕೃತ ಕಲಿತವರು. ತಮಗೂ ಸಂಸ್ಕೃತ ಕಲಿಯ ಬೇಕೆಂಬ ಅಭಿಲಾಷೆ. ಅದಕ್ಕಾಗಿ ಕೆನರಾ ಹೈಸ್ಕೂಲಿನಲ್ಲಿ ಸಂಸ್ಕೃತ ಭಾಷೆ ಕಲಿಸುವ ವ್ಯವಸ್ಥೆ ಕಲ್ಪಿಸಿದರು. ಹಲವಾರು ಸಂಸ್ಕೃತ ಪಂಡಿತರನ್ನು ಶಾಲೆಗೆ ಆಹ್ವಾನಿಸಿ ಅವರಿಂದ ಹಲವು ವಿಷಯಗಳ ಉಪನ್ಯಾಸ ನಡೆಸುತ್ತಿದ್ದರು.

## ಕೆನರಾ ಹಾಸ್ಟೆಲ್

ಹಿಂದೆ ಒಂದು ಊರಿನಿಂದ ಇನ್ನೊಂದು ಊರಿಗೆ ಜನರು ಹೋಗಲು ಎಷ್ಟು ಕಷ್ಟ ಪಡುತ್ತಿದ್ದರು ಅಂದರೆ ಹೇಳಲು ಕೂಡಾ ಬಹಳ ಕಷ್ಟ. ಸೇತುವೆಗಳ ನಿರ್ಮಾಣವಾಗದ ಕಾರಣ ನದಿಯಲ್ಲಿ ದೋಣಿ ಪ್ರಯಾಣವೇ ಗತಿಯಾಗಿತ್ತು. ಈ ಬಗ್ಗೆ ಕಾರ್ಕಳದ ವಕೀಲರಾದ ಶಾಂತರಾಮ ಕಾಮತ್ ರವರು ತಮ್ಮ ತಂದೆ ವಾಸುದೇವ ಕಾಮತ್ ಹಾಗೂ ಅಜ್ಜ ಸಾಂತಪ್ಪ ಕಾಮತರು ತಮಗೆ ಹೇಳಿದ ಅನುಭವವನ್ನು ನನ್ನಲ್ಲೊಮ್ಮೆ ಹಂಚಿ ಕೊಂಡಿದ್ದರು. ನ್ಯಾಯಾಲಯದ ವ್ಯಾಜ್ಯಕ್ಕಾಗಿ ಕಕ್ಷಿಗಾರರು ಕಾರ್ಕಳಕ್ಕೆ ಬರಬೇಕಾದ ಸಂದರ್ಭದಲ್ಲಿ 1 ಅಥವಾ 2 ದಿನ ಮುಂಚಿತವಾಗಿಯೇ ಬಂದು ಕಾಮತ್ ಮನೆಯ ಪಕ್ಕದಲ್ಲಿರುವ ಅವರ ಜಾಗದಲ್ಲಿ ವಾಸ್ತವ್ಯ ಹೂಡುತ್ತಿದ್ದರು. ಅವರಿಗೆ ಲ್ಯಾಂಪಿನ ವ್ಯವಸ್ಥೆ, ಮಲಗುವ ವ್ಯವಸ್ಥೆ ಹಾಗೂ ಬಹಿರ್ದೆಶೆಗೆ ಬೇಕಾಗುವ ವ್ಯವಸ್ಥೆ ಕೂಡಾ ಮಾಡಿಕೊಡಲಾಗುತ್ತಿತ್ತು. ಕೆಲವೊಮ್ಮೆ 2,3

ದಿನ ಕೂಡಾ ವಾಸ್ತವ್ಯ ಮಾಡಬೇಕಾಗುತ್ತಿತ್ತು. ಅಂಥ ಪರಿಸ್ಥಿತಿ ಆಗಿನ ಕಾಲದಾಗಿತ್ತು ಎಂದು ಕಾಮತ್ ಹೇಳಿದ್ದು ನನಗೆ ನೆನಪಾಗುತ್ತಿದೆ.

ಹಾಗೆಯೇ ಮಂಗಳೂರಿನ ಪರಿಸ್ಥಿತಿಯೂ ಭಿನ್ನವಾಗಿರಲಿಲ್ಲ. ದೂರದೂರದ ಊರಿನಿಂದ ಕಲಿಯಲು ಬಂದ ವಿದ್ಯಾರ್ಥಿಗಳಿಗೆ ಮರಳಿ ಊರಿಗೆ ಹೋಗಲು ಅತಿ ಕಷ್ಟವಾಗಿತ್ತು. ಶ್ರೀಮಂತ ವರ್ಗದ ಜನರು ವಸತಿ ಗೃಹವಲ್ಲಿ ದುಬಾರಿ ಬಾಡಿಗೆ ನೀಡಿ ನಿಲ್ಲುತ್ತಿದ್ದರು. ಮಧ್ಯಮ ವರ್ಗದ ಜನರ ಬಳಿ ಹಣವೂ ಇರಲಿಲ್ಲ. ಅವರಿಗೆ ರಾತ್ರಿ ಶಾಲೆಯ ಜಗಲಿಯೇ ಗತಿಯಾಗಿತ್ತು. ರಸ್ತೆಯಲ್ಲಿ ಮಾರುವ ತಿಂಡಿ, ಊಟವೇ ಇವರಿಗೆ ಪರಮಾನ್ನ. ಇವರ ಈ ಕಷ್ಟ ಮನಗಂಡು ಶ್ರೀ ಅಮ್ಮೆಂಬಾಳ್ ಸುಬ್ಬರಾವ್ ಪೈಯವರು ಇದಕ್ಕೊಂದು ಪರಿಹಾರ ಹುಡುಕಬೇಕೆಂದು ನಿಶ್ಚಯಿಸಿ ಒಂದು ಹಾಸ್ಟೆಲನ್ನು ಸ್ಥಾಪಿಸಲು ನಿರ್ಧರಿಸಿದರು. ಸ್ವತಃ ತಾವೇ ರೂಪಾಯಿ 1,600 ಹಾಕಿದರು. ಮಂಜೇಶ್ವರ ಶ್ರೀ ಮದನಂತೇಶ್ವರ ದೇವಸ್ಥಾನದಿಂದ ರೂ. 5,000, ಮುಲ್ಕಿ ಹಾಗೂ ಬಂಟ್ವಾಳ ವೆಂಕಟರಮಣ ದೇವಸ್ಥಾನಗಳಿಂದ ತಲಾ ರೂ. 2,000ಯನ್ನು ದಾನರೂಪವಾಗಿ ಪಡೆದು ಕೆನರಾ ಹಾಸ್ಟೆಲ್ಲನ್ನು ಪ್ರಾರಂಭಿಸಿದರು. ಪೈಯವರು ಬಿಡುವಿನ ವೇಳೆಯಲ್ಲಿ ಹಾಸ್ಟೆಲ್‌ಗೆ ಹೋಗಿ ಬರುತ್ತಿದ್ದರು. ಹಾಸ್ಟೆಲ್ ವಾಸಿಗಳು ಶಿಸ್ತಿನಿಂದ ಜೀವನ ನಡೆಸಬೇಕೆಂಬುದೇ ಅವರ ಅಭಿಲಾಷೆಯಾಗಿತ್ತು. ಆದರೆ ಅದಕ್ಕೆ ಕಟ್ಟುಪಾಡು ಏನೂ ವಿಧಿಸದೇ ಪ್ರೀತಿ ವಾತ್ಸಲ್ಯದಿಂದಲೇ ಶಿಸ್ತನ್ನು ನಿರೀಕ್ಷಿಸಬಹುದು ಎಂದು ಅವರ ವಿಶ್ವಾಸವಾಗಿತ್ತು.

## ಅಮರರಾದ ಅಮ್ಮೆಂಬಾಳ್ ಸುಬ್ಬರಾವ್ ಪೈ

ಸುಬ್ಬರಾವ್ ಪೈಯಂತಹ ದೇವತಾ ಮನುಷ್ಯನಿಗೆ ಶತ್ರುವಿನಂತೆ ಕಾಡಿದ್ದು ರಕ್ತವಾತ ಖಾಯಿಲೆ (ಇದನ್ನು ಇಂಗ್ಲೀಷಿನಲ್ಲಿ ಗೌಟ್ ಎನ್ನುತ್ತಾರೆ). ಅಂದು ಜುಲಾಯಿ 19, 1909, ಅವರ ಶರೀರದಲ್ಲೆಲ್ಲಾ ಈ ಖಾಯಿಲೆಯ ಪರಿಣಾಮದಿಂದ ಅಪಾರ ನೋವು ಹರಡಿತ್ತು. ನಡೆಯಲು, ಕುಳಿತುಕೊಳ್ಳಲು ಮಾತ್ರವಲ್ಲ ಧರಿಸಿದ ಕೋಟನ್ನು ಬಿಚ್ಚಲು ಸಹ ಕಷ್ಟವೆನಿಸಿತ್ತು. ರಕ್ತವಾತದ

ಸಂಧಿವಾತ ಅಂದರೆ ರಕ್ತದಲ್ಲಿ ಯೂರಿಕ್ ಆಮ್ಲ ಹೆಚ್ಚಾಗಿ ಚಿಕ್ಕ ಮತ್ತು ದೊಡ್ಡ ಗಂಟುಗಳು ಊದಿಕೊಂಡು ಗಂಟುಗಳಲ್ಲಿ ಸಹಿಸಲಾರದಷ್ಟು ನೋವು ಬರುತ್ತದೆ. ಆಗ ಈ ಖಾಯಿಲೆಗೆ ಒಳ್ಳೆಯ ಔಷಧಿ ಕೂಡಾ ಇರಲಿಲ್ಲ. 1909ನೇ ಜುಲಾಯಿ 23ರಂದು ಸುಬ್ಬರಾವ್ ಪೈಯವರ ಚಿಂತಾಜನಕ ಸ್ಥಿತಿಯನ್ನು ಕಂಡು ಮದ್ರಾಸ್‌ನಲ್ಲಿದ್ದ ಅವರ ಮಗ ಬಾಲಕೃಷ್ಣನಿಗೆ ತಂತಿ ಮೂಲಕ ಸಂದೇಶ ಕಳುಹಿಸಿದರು.

1909, 25ನೇ ಜುಲಾಯಿ ರವಿವಾರದಂದು ಸುಮಾರು 4 ಗಂಟೆ ಹೊತ್ತಿಗೆ ಸುಬ್ಬರಾವ್ ಪೈಯವರು ವಿಧಿವಶರಾದರು. ಸುಬ್ಬರಾವ್ ಪೈಯವರ ಮರಣದ ವಾರ್ತೆ ಒಂದೇ ಘಳಿಗೆಯಲ್ಲಿ ಮಂಗಳೂರಿನಾದ್ಯಂತ ಹರಡಿತ್ತು. ಅಂಗಡಿಗಳೆಲ್ಲಾ ಮುಚ್ಚಿದುವು. ಗ್ರಾಮಾಂತರ ಮತ್ತು ಪೇಟೆಯ ಜನರೆಲ್ಲ ಅವರ ಅಂತಿಮ ದರ್ಶನಕ್ಕೆಂದು ಮಂಗಳೂರಿನ ಡೊಂಗರಕೇರಿಯ ಅವರ ಮನೆಗೆ ಬರಲಾರಂಭಿಸಿದರು. 6 ಗಂಟೆಯ ಹೊತ್ತಿಗೆ ಮಗ ಬಾಲಕೃಷ್ಣ ಬಂದ ಮೇಲೆ ಶವ ಸಂಸ್ಕಾರದ ಕಾರ್ಯಗಳು ಪ್ರಾರಂಭ ವಾದುವು. ಪೈಯವರ ಅಂತಿಮ ದರ್ಶನಕ್ಕೆಂದು ಬೀದಿಗಳಲ್ಲಿ ಜನರ ಗುಂಪೇ ನೆರೆದಿತ್ತು. ನಭೂತೋನಭವಿಷ್ಯತೀ ಎಂಬಂತೆ ಮಂಗಳೂರಿನ ಮತ್ತು ಸಮಾಜದ ಎಲ್ಲಾ ಜನರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಅವರ ಕುಟುಂಬದ ದುಃಖವನ್ನು ಹಂಚಿಕೊಂಡರು. ಸಮಾಜೋದ್ಧಾರಕ ಸುಬ್ಬರಾವ್ ಪೈ ಅಮರರಾದರು.

## ಅಮ್ಮೆಂಬಾಳ ಸುಬ್ಬರಾವ್ ಪೈ ದತ್ತಿ ನಿಧಿ

ಶ್ರೀ ಅಮ್ಮೆಂಬಾಳ ಸುಬ್ಬರಾವ್ ಪೈಯವರು ಮಾಡಿದ ಉತ್ತಮ ಸಾಮಾಜಿಕ ಅಭಿವೃದ್ಧಿ ಕೆಲಸದಿಂದ ಅವರ ಹೆಸರು ಸಮಾಜದಲ್ಲಿ ಅಚ್ಚಳಿಯದೇ ಉಳಿದಿದೆ. 1913ನೇ ಇಸವಿಯಲ್ಲಿ ಅಮ್ಮೆಂಬಾಳ್ ಸುಬ್ಬರಾವ್ ಪೈ ಸ್ಮಾರಕ ದತ್ತಿನಿಧಿಯನ್ನು ಸ್ಥಾಪಿಸಿದರು. ಈ ನಿಧಿಯಿಂದ 1) ಫ್ರೀ ಸ್ಕಾಲರ್‌ಶಿಪ್ 2) ಲೋನ್ ಸ್ಕಾಲರ್‌ಶಿಪ್ 3) ಬುಕ್ ಬ್ಯಾಂಕ್ ಇವುಗಳನ್ನು ಅರ್ಹ ವಿದ್ಯಾರ್ಥಿಗಳಿಗೆ ನೀಡುತ್ತಾರೆ.



ಅಮ್ಮೆಂಬಳ ಸುಬ್ಬರಾವ್‌ರವರ ಜನ್ಮ ಸ್ಥಳದಲ್ಲಿ **1983** ರಲ್ಲಿ
ಶ್ರೀಮದ್ ಸುಧೀಂದ್ರತೀರ್ಥ ಸ್ವಾಮೀಜಿಯವರಿಂದ ಮುಲ್ಕಿ ಸಭಾಗೃಹದ ಶಂಖು ಸ್ಥಾಪನೆ.



1886ರಲ್ಲಿ ಮುಲ್ಕಿ ಸಭಾಗೃಹದ ನೆಲ ಅಂತಸ್ತಿನ ಉದ್ಘಾಟನೆ ಶ್ರೀಮದ್ ಸುಧೀಂದ್ರತೀರ್ಥ
ಸ್ವಾಮೀಜಿಯವರ ದಿವ್ಯ ಸಾನಿಧ್ಯದಲ್ಲಿ ಕೆನರಾ ಬ್ಯಾಂಕಿನ ಎಕ್ಸಿಕ್ಯೂಟಿವ್ ಡೈರೆಕ್ಟರ್
ಶ್ರೀ ಎಸ್.ಡಿ. ಪ್ರಭುರವರಿಂದ.



**1996**ರಲ್ಲಿ ಮುಲ್ಕಿ ಸಭಾಗೃಹದ ಒಂದನೇ ಮಹಡಿಯಲ್ಲಿ
ಅಮ್ಮೆಂಬಳ ಸುಬ್ಬರಾವ್‌ಪೈ ರಂಗ ಮಂಟಪದ ಉದ್ಘಾಟನೆ



ವಸ್ತು ಸಂಗ್ರಹಾಲಯದಲ್ಲಿರುವ ಶ್ರೀ ಅಮ್ಮೆಂಬಳ ಸುಬ್ಬರಾವ್‌ಪೈ ಯವರ ಪುತ್ಥಳಿ








ಸ್ಥಾಪಕರ ಶಾಖೆ ಮತ್ತು ಈಗ ವಸ್ತು ಸಂಗ್ರಹಾಲಯ, ಡೊಂಗರಕೇರಿ, ಮಂಗಳೂರು



*Circa 1906*

*Sri Ammembal Subba Rao Pai,*
*The Bank's Visionary Founder*
*went from village to village on*
*a bullock cart to raise the initial capital.*
*Today, we stand testimony*
*to his enduring vision.*

# ಕೆನರಾ ವಿದ್ಯಾ ಸಮೂಹ ಸಂಸ್ಥೆಗಳು

| ಸಂಖ್ಯೆ | ಸಂಸ್ಥೆಯ ಹೆಸರು ಮತ್ತು ವಿಳಾಸ | ಕೋರ್ಸ್ | ಕೋರ್ಸಿನ ಅವಧಿ | ಡಿಪ್ಲೋಮ, ಡಿಗ್ರಿ (ಯುಜಿ, ಪಿಜಿ) | ವಾರ್ಷಿಕ ವಿದ್ಯಾರ್ಥಿಗಳ ಸಂಖ್ಯೆ | ಪ್ರಾರಂಭವಾದ ವರ್ಷ |
|---|---|---|---|---|---|---|
| (1) | (2) | (3) | (4) | (5) | (6) | (7) |
| 1. | ಕೆನರಾ ಹೈಸ್ಕೂಲ್ (ಮೈನ್) ಎ.ಎಸ್.ಆರ್.ಪಿ. ರೋಡ್ ಕೊಡಿಯಾಲ್ ಬೈಲ್ ಮಂಗಳೂರು | ಎಸ್.ಎಸ್.ಎಲ್.ಸಿ. ಪರೀಕ್ಷೆಗಾಗಿ ಕೋರ್ಸ್ | 5 ವರ್ಷ | ಹೈಸ್ಕೂಲ್ | 1000 ವಿದ್ಯಾರ್ಥಿಗಳು | 1891 |
| 2. | ಕೆನರಾ ಹೆಣ್ಮಕ್ಕಳ ಹೈಸ್ಕೂಲ್ ಎ.ಎಸ್.ಆರ್.ಪಿ. ರೋಡ್ ಕೊಡಿಯಾಲ್ ಬೈಲ್ ಮಂಗಳೂರು | ಎಸ್.ಎಸ್.ಎಲ್.ಸಿ. ಪರೀಕ್ಷೆಗಾಗಿ ಕೋರ್ಸ್ | 5 ವರ್ಷ | ಹೈಸ್ಕೂಲ್ | 650 ವಿದ್ಯಾರ್ಥಿಗಳು | 1894 |
| 3. | ಕೆನರಾ ಹೈಸ್ಕೂಲ್ ಉರ್ವ, ಮಂಗಳೂರು | ಎಸ್.ಎಸ್.ಎಲ್.ಸಿ. ಪರೀಕ್ಷೆಗಾಗಿ ಕೋರ್ಸ್ | 5 ವರ್ಷ | ಹೈಸ್ಕೂಲ್ | 1200 ವಿದ್ಯಾರ್ಥಿಗಳು | 1944 |
| 4. | ಕೆನರಾ ಹೈಯರ್ ಪ್ರೈಮರಿ ಸ್ಕೂಲ್ ಎ.ಎಸ್.ಆರ್.ಪಿ. ರೋಡ್ ಕೊಡಿಯಾಲ್‌ಬೈಲ್ ಮಂಗಳೂರು | 5 ನೇ ತರಗತಿಗಾಗಿ ಕೋರ್ಸ್ | 5 ವರ್ಷ | ಹೈಯರ್ ಪ್ರೈಮರಿ ಸ್ಕೂಲ್ | 300 ವಿದ್ಯಾರ್ಥಿಗಳು | 1947 |
| 5 | ಕೆನರಾ ನರ್ಸರಿ ಸ್ಕೂಲ್ ಎ.ಎಸ್.ಆರ್.ಪಿ. ರೋಡ್ ಕೊಡಿಯಾಲ್ ಬೈಲ್ ಮಂಗಳೂರು | 1ನೇ ತರಗತಿಗಾಗಿ ಕೋರ್ಸ್ | 2 ವರ್ಷ | ಲೋವರ್ ಪ್ರೈಮರಿ ಸ್ಕೂಲ್ | 200 ವಿದ್ಯಾರ್ಥಿಗಳು | 1968 |

| (1) | (2) | (3) | (4) | (5) | (6) | (7) |
|---|---|---|---|---|---|---|
| 6 | ಕೆನರಾ ಇಂಗ್ಲೀಷ್ ಹೈಯರ್ ಪ್ರೈಮರಿ ಸ್ಕೂಲ್ ಎ.ಎಸ್.ಆರ್.ಪಿ. ರೋಡ್ ಕೊಡಿಯಾಲ್ ಬೈಲ್ ಮಂಗಳೂರು | 5ನೇ ತರಗತಿಗಾಗಿ ಕೋರ್ಸ್ | 5 ವರ್ಷ | ಹೈಯರ್ ಪ್ರೈಮರಿ ಸ್ಕೂಲ್ | 750 ವಿದ್ಯಾರ್ಥಿಗಳು | 1970 |
| 7 | ಕೆನರಾ ಪ್ರೀ ಯೂನಿವರ್ಸಿಟಿ ಕಾಲೇಜ್ ಕೊಡಿಯಾಲ್ ಬೈಲ್ ಮಂಗಳೂರು | ಪ್ರೀ ಡಿಗ್ರಿಗಾಗಿ ಕೋರ್ಸ್ | 2 ವರ್ಷ | ಪ್ರೀ ಡಿಗ್ರಿ ಕಾಲೇಜ್ | 1200 ವಿದ್ಯಾರ್ಥಿಗಳು | 1970 |
| 8 | ಕೆನರಾ ಕಾಲೇಜ್ ಕೊಡಿಯಾಲ್ ಬೈಲ್ ಮಂಗಳೂರು | ಪೋಸ್ಟ್ ಗ್ರಾಜ್ಯುವೇಷನ್ ಗಾಗಿ ಕೋರ್ಸ್ | 3 ವರ್ಷ | ಡಿಗ್ರಿ ಕಾಲೇಜ್ | 900 ವಿದ್ಯಾರ್ಥಿಗಳು | 1973 |
| 9 | ಕೆನರಾ ಬಾಲ್ವಾಡಿ ಸ್ಕೂಲ್ ಎ.ಎಸ್.ಆರ್.ಪಿ. ರೋಡ್ ಕೊಡಿಯಾಲ್ ಬೈಲ್ ಮಂಗಳೂರು | 1ನೇ ತರಗತಿ ಗಾಗಿ ಕೋರ್ಸ್ | 2 ವರ್ಷ | ಲೋವರ್ ಪ್ರೈಮರಿ ಸ್ಕೂಲ್ | 80 ವಿದ್ಯಾರ್ಥಿಗಳು | 1978 |
| 10 | ಕೆನರಾ ಹೈಯರ್ ಪ್ರೈಮರಿ ಸ್ಕೂಲ್, ಉರ್ವ, ಮಂಗಳೂರು | 5ನೇ ತರಗತಿ ಗಾಗಿ ಕೋರ್ಸ್ | 5 ವರ್ಷ | ಹೈಯರ್ ಪ್ರೈಮರಿ ಸ್ಕೂಲ್ | 650 ವಿದ್ಯಾರ್ಥಿಗಳು | 1989 |
| 11 | ಕೆನರಾ ನರ್ಸರಿ ಸ್ಕೂಲ್, ಉರ್ವ, ಮಂಗಳೂರು | 1ನೇ ತರಗತಿ ಗಾಗಿ ಕೋರ್ಸ್ | 2 ವರ್ಷ | ಲೋವರ್ ಪ್ರೈಮರಿ ಸ್ಕೂಲ್ | 200 ವಿದ್ಯಾರ್ಥಿಗಳು | 1991 |
| 12 | ಕೆನರಾ ಇಂಜನಿಯರಿಂಗ್ ಕಾಲೇಜ್, ಬೆಂಜನ್ ಪದವು ಬಂಟ್ವಾಳ ತಾಲೂಕು | ಇಂಜನಿಯರಿಂಗ್ | 4 ವರ್ಷ | ಅಂಡರ್ ಗ್ರಾಜ್ಯುವೇಟ್ | 950 ವಿದ್ಯಾರ್ಥಿಗಳು | 2001 |

# CANARA GROUP OF INSTITUTIONS



CANARA HIGH SCHOOL (MAIN)
ASRP Road, Kodialbail, Mangalore



CANARA GIRLS HIGH SCHOOL (MAIN)
ASRP Road, Kodialbail, Mangalore



CANARA HIGH SCHOOL
Urva, Mangalore



CANARA Hr. PRIMARY SCHOOL
ASRP Road, Kodialbail, Mangalore



CANARA NURSERY SCHOOL
ASRP Road, Kodialbail, Mangalore



CANARA ENG. HR. PRIMARY SCHOOL
ASRP Road, Kodialbail, Mangalore



CANARA PRE-UNIVERSITY COLLEGE
Kodialbail, Mangalore



CANARA COLLEGE
Kodialbail, Mangalore



CANARA COLLEGE
Kodialbail, Mangalore



CANARA BALWADI SCHOOL
ASRP Road, Kodialbail, Mangalore



CANARA NURSERY SCHOOL
Urva, Mangalore



CANARA ENGG. COLLEGE
Benjan Padavu, Bantwal



Canara Tennis Academy



Silver Jubilee Building



Canara Cutting Dress
Making Centre



Sri T.V. Raman Pai
Conventional Hall

# ದೇಶದ ಇತಿಹಾಸದಲ್ಲಿಯೇ ಹೊಸ ಬೆಳಕು ಮತ್ತು ಕೆನರಾ ಬ್ಯಾಂಕ್ ಸ್ಥಾಪನೆ

# ಶತಮಾನೋತ್ಸವ

## [1906-2006]

ಕಳೆದ ಶತಮಾನ ಆರಂಭಿಕ ದಿನಗಳಲ್ಲಿ ನಮ್ಮ ಜನರು ತಮಗೆ ಹುಟ್ಟಿದ ಮಗುವಿನ ಮುಂದಿನ ಜೀವನಕ್ಕೆ ದಾರಿದೀಪವಾಗುವರೇ ಮತ್ತು ಭವಿಷ್ಯನಿಧಿಗೆಂದು ಊರಿನ ಶ್ರೀಮಂತ ಹಾಗೂ ಶ್ರೇಷ್ಠ ವ್ಯಕ್ತಿಗಳಲ್ಲಿ ತಮ್ಮ ಹಣವನ್ನು ಇಟ್ಟುಕೊಳ್ಳಲು ಕೊಡುತ್ತಿದ್ದರು.ಈ ಪದ್ಧತಿ ಯಾವುದೇ ರೀತಿಯ ಕಾಗದ ಪತ್ರ, ಬಡ್ಡಿದರವಿಲ್ಲದೆ 18 ವರ್ಷಗಳ ಅವಧಿಗಾಗಿ ಇಡಬೇಕಾಗಿತ್ತು. ಯಾರಾದರೊಬ್ಬರು ಮೃತ್ಯುಪಟ್ಟರೆ ಮೋಸವಾಗುವ ಸಂದರ್ಭವೇ ಹೆಚ್ಚಾಗುತ್ತಿತ್ತು. ಮಾತ್ರವಲ್ಲ ಇಂತಹ ಕೇಸುಗಳನ್ನು ಗೆಲ್ಲುವುದು ತೀರಾ ಕಷ್ಟವಾಗಿ ಇಂತಹ ಅವೈಜ್ಞಾನಿಕ ಪದ್ಧತಿಯನ್ನು ಹೋಗಲಾಡಿಸಲೆಂದೇ ಸುಬ್ಬರಾವ್ ಪೈಯವರು ಬ್ಯಾಂಕ್ ಸ್ಥಾಪಿಸುವ ಯೋಚನೆ ಮಾಡಿದರು.

ಇದು ಮಾತ್ರವಲ್ಲದೇ ಕೆನರಾ ಬ್ಯಾಂಕಿನ ಸ್ಥಾಪನೆಗೆ ಇನ್ನೊಂದು ಮುಖ್ಯವಾದ ಕಾರಣವಿತ್ತು. ಆ ಸಮಯದಲ್ಲಿ ಮಂಗಳೂರಿನಲ್ಲಿದ್ದ ಒಂದೇ ಒಂದು ಬ್ಯಾಂಕ್ ಮದ್ರಾಸು ಬ್ಯಾಂಕ್ ಶ್ರೀಮಂತರ ಬ್ಯಾಂಕ್ ಎಂದೇ ಪರಿಗಣಿಸಲಾಗಿತ್ತು. ಏಕೆಂದರೆ ಬರೀ ಶ್ರೀಮಂತ ಜನರೇ ಈ ಬ್ಯಾಂಕಿನಲ್ಲಿ ವ್ಯವಹಾರ ನಡೆಸಿ ಲಕ್ಷಗಟ್ಟಲೆ ಹಣ ಠೇವಣಿ ಇರಿಸಿ ಅಥವಾ ಸಾಲ ಸ್ವೀಕರಿಸುತ್ತಿದ್ದು ಮಧ್ಯಮ ಹಾಗೂ ಬಡವರ್ಗದ ಜನರಿಗೆ ಈ ಬ್ಯಾಂಕಿನ

ಬಾಗಿಲು ಮುಚ್ಚಿತು. ಇಂಥವರು ಊರಿನಲ್ಲಿ ಇದ್ದ ಮಾರ್ವಾಡಿಗಳ ಬಳಿ ಹೆಚ್ಚಿನ ಬಡ್ಡಿ ನೀಡಿ ಸಾಲ ಪಡೆಯುತ್ತಿದ್ದರು. ಸಾಲಗಾರನಿಗೆ ಅಸಲು ಹಣ ಹಿಂತಿರುಗಿಸುವುದು ಬಿಡಿ, ಬಡ್ಡಿಯನ್ನು ಸರಿಯಾಗಿ ಪಾವತಿಸುವರೇ ಕಷ್ಟವಾಗಿ, ತನ್ನ ಸಂಸಾರ ಬೀದಿ ಪಾಲಾಗುವ ಸ್ಥಿತಿ ಬಂದು ಬಿಡುತ್ತಿತ್ತು. ಈ ಪರಿಸ್ಥಿತಿಯನ್ನು ಮನಗಂಡು, ಒಂದು ಬ್ಯಾಂಕನ್ನು ಸ್ಥಾಪಿಸಿದರೇ ಇದಕ್ಕೆ ಪರಿಹಾರ ಕಂಡುಕೊಳ್ಳಬಹುದು ಎಂಬ ವಿಚಾರಧಾರೆಗೆ ಮುಳುಗಿದರು.

1894ರ ಸಾಲಿನಲ್ಲಿ ಮಧುರೈಯಲ್ಲಿ ಕೆಲವು ವಕೀಲರು ಮತ್ತು ವ್ಯಾಪಾರಿಗಳು ಸೇರಿಕೊಂಡು ಮಧುರೈ ಹಿಂದೂ ಪರ್ಮನೆಂಟ್ ಫಂಡ್ ಲಿಮಿಟೆಡ್ ಹೆಸರಿನಲ್ಲಿ ಬ್ಯಾಂಕ್ ಪ್ರಾರಂಭಿಸಿದರು. 10 ವರ್ಷಗಳ ಅವಧಿಯೊಳಗೆ ಅದು ಒಳ್ಳೆ ಅಭಿವೃದ್ಧಿಗೊಂಡಿತು. ಇದೇ ರೀತಿಯಲ್ಲಿ ಸುಬ್ಬರಾವ್ ಪೈಯವರು 1906ರಲ್ಲಿ ಕೆನರಾ ಹಿಂದೂ ಪರ್ಮನೆಂಟ್ ಫಂಡ್ ಲಿಮಿಟೆಡ್ ಹೆಸರಿನಲ್ಲಿ ಬ್ಯಾಂಕನ್ನು ಮಂಗಳೂರಿನಲ್ಲಿ ಸ್ಥಾಪಿಸಿದರು. ಮಧುರೈ ಫಂಡಿನ ನೀತಿ ನಿಯಮಗಳನ್ನು ತರಿಸಿ ತುಲನೆ ಮಾಡಿಸಿ ಸಾಕಷ್ಟು ಬದಲಾವಣೆಗಳಿಂದ ತನ್ನ ಬ್ಯಾಂಕಿನ ನಿಯಮಗಳನ್ನು ರೂಪಿಸಿದರು. ಸಾಲದ ಬಡ್ಡಿಯ ದರವನ್ನು 10%ಕ್ಕಿಂತ ಯಾವ ಸಮಯದಲ್ಲೂ ಹೆಚ್ಚು ಇರಬಾರದು ಎಂಬ ಮುಖ್ಯ ಬದಲಾವಣೆ ಮಾಡಿದರು. ಸಾಲದ ಬಗ್ಗೆ ಬಡ್ಡಿ ದರದ ಇಳಿಮುಖವೇ ಪೈಯವರ ಬ್ಯಾಂಕಿನ ವಿಶೇಷತೆಯಾಗಿತ್ತು. ಬ್ಯಾಂಕಿನ ಬಗ್ಗೆ ಒಂದು ಕಿರು ಹೊತ್ತಿಗೆಯನ್ನು ಹೊರ ತಂದು ತಾವೇ ಎತ್ತಿನಗಾಡಿಯಲ್ಲಿ ಕುಳಿತು ಜನರಿಂದ 50 ರೂ. ಪಡೆದು ಬ್ಯಾಂಕಿನ ಎಲ್ಲಾ ಶೇರುಗಳನ್ನು ಮಾರಾಟಮಾಡುವುದರಲ್ಲಿ ಯಶಸ್ವಿಯಾದರು. ಒಬ್ಬ ವ್ಯಕ್ತಿಯು ಹತ್ತು ಶೇರುಗಳನ್ನು ಮಾತ್ರ ಪಡೆಯಬಹುದಾಗಿತ್ತು. ಕೆಲವೇ ಸಮಯದಲ್ಲಿ ಒಂದು ಲಕ್ಷ ರೂಪಾಯಿ ಮೂಲಧನ ಸಂಗ್ರಹವಾಯಿತು. ಇದಕ್ಕೆ ಮುಖ್ಯ ಕಾರಣ ಜನರಿಗೆ ಪೈಯವರ ಮೇಲಿದ್ದ ಅಪಾರ ನಂಬಿಕೆ ಹಾಗೂ ವಿಶ್ವಾಸ. ಮಂಗಳೂರಿನ ಡೊಂಗರಕೇರಿ ರಸ್ತೆಯಲ್ಲಿ ವರ್ಷಕ್ಕೆ 120 ರೂಪಾಯಿಗೆ ಒಂದು ಕಟ್ಟಡವನ್ನು ಬಾಡಿಗೆಗೆ ಪಡೆಯಲಾಯಿತು.

ಒಟ್ಟು ಉದ್ಯೋಗಿಗಳ ಸಂಖ್ಯೆ 4 ಮಾತ್ರ ಆಗಿತ್ತು. ಬ್ಯಾಂಕಿನ ಸ್ಥಾಪನೆಗೆ ಆದ ಖರ್ಚು 45 ರೂ. ಆಗ 18 ನಿರ್ದೇಶಕರು ಮಾರ್ಚ್ 1907ರ ತನಕ ವೇತನರಹಿತ ಸೇವೆ ನೀಡಿದ್ದರು. ಸುಬ್ಬರಾವ್ ಪೈ ಅವರು ಈ ಬೋರ್ಡಿನ ಅಧ್ಯಕ್ಷರಾಗಿ, ಕೆ.ಪಿ.ರಾಮರಾವ್ ಅವರು ಕೋಶಾಧಿಕಾರಿಯಾಗಿ, ಎ.ಗೋಪಾಲನಾಯಕ್ ಕಾರ್ಯದರ್ಶಿಯಾಗಿ, ಕಾಪೂರು ರಾಘವೇಂದ್ರ ಪೈಯವರು ಬಿಲ್ ಕಲೆಕ್ಟರ್‌ರಾಗಿ ನೇಮಕರಾದರು.

31-03-1907ಕ್ಕೆ ಬ್ಯಾಂಕಿನ ಫಲಿತಾಂಶ ಈ ಕೆಳಗಿನಂತೆ ಇತ್ತು.

1) ಪ್ರದತ್ತ ಪೂಂಜಿ : ರೂ. 54,045
2) ಸಾವಧಿ ಜಮಾ : ರೂ. 19,160
3) ಚಾಲ್ತಿ ಖಾತೆ : ರೂ. 23,260
4) ಅಗ್ರೀಮ್ : ರೂ. 83,716
5) ಲಾಭ : ರೂ. 2,421

25ನೇ ಜುಲೈ 1909ಕ್ಕೆ ಶ್ರೀ ಎ.ಸುಬ್ಬರಾವ್ ಪೈಯವರು ದಿವಂಗತರಾದರು. ಮಾರ್ಚ್ 1914ಕ್ಕೆ ಬ್ಯಾಂಕ್ ತನ್ನ ಈಗಿನ ಪರಿಸರವನ್ನು ಶ್ರೀ ಕೆ.ಪಿ.ರಾಮರಾವ್‌ರವರಿಂದ ರೂ. 4,500ಕ್ಕೆ ಖರೀದಿಸಿತ್ತು. ಹಾಗೆಯೇ 1923ರಲ್ಲಿ ಒಂದು ಉಪಸಮಿತಿಯು ಮೂಲಕ ಭವಿಷ್ಯನಿಧಿಯ ನಿಯಮಾವಳಿಗಳನ್ನು ರೂಪಿಸಿ ಅದನ್ನು ಜಾರಿಗೊಳಿಸಲಾಯಿತು.

ಜಿಲ್ಲಾ ಕೇಂದ್ರ ಮಂಗಳೂರಿನಲ್ಲಿ ಬ್ಯಾಂಕ್ ಸ್ಥಾಪನೆಯ 2 ದಶಕಗಳ ನಂತರ ದಿನಾಂಕ 01-10-1926ಕ್ಕೆ ಕಾರ್ಕಳದಲ್ಲಿ ತನ್ನ 2ನೆಯ ಶಾಖೆಯನ್ನೂ, 16-10-1926ರಲ್ಲಿ ಕೇರಳ ರಾಜ್ಯದ ಕಾಸರಗೋಡಿನಲ್ಲಿ 3ನೇ ಶಾಖೆಯನ್ನೂ, 22-11-1926ಕ್ಕೆ ಕೊಚ್ಚಿಯಲ್ಲಿ 4ನೇ ಶಾಖೆಯನ್ನೂ ತೆರೆಯಲಾಯಿತು.

1927ನೇ ಸಾಲಿನಲ್ಲಿ ಬ್ಯಾಂಕಿನ ಉದ್ಯೋಗಿಗಳ ನಿವೃತ್ತಿಯ ಅವಧಿಯನ್ನು ಕೆನರಾಬ್ಯಾಂಕ್ 55 ವರ್ಷಕ್ಕೆ ಎಂದು ನಿರ್ಧರಿಸಿತು ಹಾಗೂ

ನಿರ್ದೇಶಕ ನಿವೃತ್ತಿಯ ಅವಧಿ 60 ವರ್ಷಕ್ಕೆ ಏರಿಸಿತು. ಕೆನರಾ ಬ್ಯಾಂಕಿನ ರಜತ ಮಹೋತ್ಸವವನ್ನು 1931ನೇ ಇಸವಿಯಲ್ಲಿ ಸಡಗರ ಸಂಭ್ರಮದಿಂದ ಆಚರಿಸಲಾಯಿತು. ಈ ಸಂದರ್ಭದಲ್ಲಿ ಬ್ಯಾಂಕಿನ ಪ್ರಧಾನ ಕಚೇರಿಯ ಎದುರು ಸುಬ್ಬರಾವ್ ಪೈಯವರ ತಲೆ, ಭುಜ ಹಾಗೂ ಎದೆಯುಳ್ಳ ಅಮೃತ ಶಿಲೆಯ ಪುತ್ಥಳಿಯನ್ನು ಪ್ರತಿಷ್ಠಾಪಿಸುವರೇ ನಿರ್ಧರಿಸಲಾಯಿತು. ಆಗ ಕೆನರಾ ಹೈಸ್ಕೂಲಿನ ಮುಖ್ಯೋಪಧ್ಯಾಯರಾದ ಬಿ. ಅಚ್ಯುತ ಬಾಳಿಗರು ಪ್ರತಿಮೆಯನ್ನು ಹೈಸ್ಕೂಲಿನ ಎದುರು ಪ್ರತಿಷ್ಠೆ ಮಾಡಿದರೆ ಉತ್ತಮ ಎಂಬ ಅಭಿಪ್ರಾಯ ನೀಡಿದಾಗ ಎಲ್ಲರೂ ಒಪ್ಪಿ, ಈ ಪ್ರತಿಮೆಯನ್ನು ರಥಬೀದಿಯ ಮೂಲಕ ಮೆರವಣಿಗೆಯಲ್ಲಿ ಕೊಂಡೊಯ್ದು ಶಾಲೆಯ ಎದುರುಗಡೆ ಪ್ರತಿಷ್ಠೆ ಮಾಡಲಾಯಿತು. ಕಾಕತಾಳೀಯವೇನೆಂದರೆ ಬ್ಯಾಂಕಿನ ಪ್ರಧಾನ ಕಚೇರಿಯಿಂದ ಕೆನರಾ ಹೈಸ್ಕೂಲಿಗೆ ಸರಿಯಾಗಿ ನೂರು ಗಜ ದೂರ ಕೂಡ ಇರಲಿಲ್ಲ.

ಪ್ರತಿಮೆ ಪ್ರತಿಷ್ಠೆಯ ಮೆರವಣಿಗೆ ಒಂದು ಅದ್ಭುತ ಹಾಗೂ ಸ್ಮರಣೀಯವಾಗಿತ್ತು. **ಇದೇ ಸಂದರ್ಭದಲ್ಲಿ ಕೆನರಾ ಹೈಸ್ಕೂಲಿಗೆ ಕೆನರಾ ಬ್ಯಾಂಕ್ ಸಿಲ್ವರ್ ಜುಬಿಲಿ ಸ್ಕಾಲರ್‌ಶಿಪ್‌ನ್ನು ಕೊಡಲಾಯಿತು.**

1936ರಲ್ಲಿ ಕೆನರಾ ಬ್ಯಾಂಕಿನ ಶಾಖೆಯನ್ನು ಮುಲ್ಕಿಯಲ್ಲಿ ತೆರೆಯಲಾಯಿತು. 1939ನೇ ಸಾಲಿನಲ್ಲಿ ಶ್ರೀ ಕೆ.ಪಿ.ಜೆ. ಪ್ರಭುರವರು ತನ್ನ 29ನೇ ವರ್ಷದಲ್ಲಿ ಕೆನರಾ ಬ್ಯಾಂಕ್ ಲಿಮಿಟೆಡ್‌ನ ನಿರ್ದೇಶಕರಾಗಿ ಆಯ್ಕೆಯಾದರು.

1939-40ರ ಸಾಲಿನಲ್ಲಿ ಬ್ಯಾಂಕಿನ ನಿರ್ದೇಶಕರ ಬಳಿ 0.5% ಶೇರು ಇತ್ತು. ಬಾಕಿ 99.5% ಶೇರು ಸಾಮಾನ್ಯ ಶೇರುದಾರರಲ್ಲಿತ್ತು. ಆ ಸಮಯದಲ್ಲಿ ಉಳಿದ ಬ್ಯಾಂಕುಗಳಲ್ಲಿ ಅಷ್ಟೊಂದು ಶೇರು ಇರಲಿಲ್ಲ. 1935 ಮತ್ತು 1945ರ ನಡುವೆ ಕೆನರಾ ಬ್ಯಾಂಕಿನ ನಿವ್ವಳ ಲಾಭ 9 ಪಟ್ಟು ಹೆಚ್ಚಾಯಿತು. 1943ರಲ್ಲಿ ಮಹಾ ಪ್ರಬಂಧಕರ ಕಾರ್ಯಾಲಯವನ್ನು

ಮಂಗಳೂರಿನಿಂದ ಮುಂಬಯಿಗೆ ಸ್ಥಳಾಂತರಿಸಲಾಯಿತು. 1946ನೇ ಸಾಲಿನಲ್ಲಿ ಕೆನರಾ ಬ್ಯಾಂಕಿನ ಶಾಖೆಯನ್ನು ಕರಾಚಿಯಲ್ಲಿ ತೆರೆಯಲಾಯಿತು. ಮರುವರ್ಷ ಸ್ವಾತಂತ್ರ್ಯೋತ್ಸವವನ್ನು ಬ್ಯಾಂಕಿನವರು ಅದ್ದೂರಿಯಲ್ಲಿ ಆಚರಿಸಿದರು. ಸ್ವಾತಂತ್ರ್ಯದ ಸವಿನೆನಪಿಗಾಗಿ ಬ್ಯಾಂಕಿನ ಎಲ್ಲಾ ಉದ್ಯೋಗಿಗಳಿಗೆ ಬೋನಸನ್ನು ನೀಡಲಾಯಿತು.

1950ನೇ ಇಸವಿಯಲ್ಲಿ ಬ್ಯಾಂಕಿನ ಒಟ್ಟು ಬಂಡವಾಳ 8 ಕೋಟಿ ರೂಪಾಯಿ ಆಯಿತು. ಎಲ್ಲಾ ಭಾರತೀಯ ನಮೂದಿತ ಬ್ಯಾಂಕುಗಳಲ್ಲಿ ಕೆನರಾ ಬ್ಯಾಂಕ್ 16ನೇ ಸ್ಥಾನದಲ್ಲಿತ್ತು.

ಈ ವರ್ಷದಲ್ಲಿ ಕೆನರಾ ಬ್ಯಾಂಕ್ ಪ್ರಥಮ ಬಾರಿಗೆ ಎಲ್ಲಾ ಪ್ರಬಂಧಕರನ್ನು ನೇಮಿಸಿತು. ಮೂರು ಮುಖ್ಯ ಕಾರ್ಯಾಲಯಗಳಾದ ಬೆಂಗಳೂರು, ಮದ್ರಾಸ್ ಹಾಗೂ ಮಧುರೆಯಲ್ಲಿ ತನ್ನ ಶಾಖೆಗಳನ್ನು ನೋಡಿಕೊಳ್ಳುವುದಕ್ಕಾಗಿ ಮೂರು ವರಿಷ್ಟ ಪ್ರಬಂಧಕರನ್ನು ಜಿಲ್ಲಾ ಪ್ರಬಂಧಕರ ರೂಪದಲ್ಲಿ ಕಾರ್ಯನಿರ್ವಹಿಸಲು ನೇಮಿಸಲಾಯಿತು. ಪ್ರಾದೇಶಿಕ ನೆಲೆಯಲ್ಲಿ ನಿಯಮಾವಳಿಗಳ ವಿಕೇಂದ್ರೀಕರಣ ಆದ ದೃಷ್ಟಿಯಲ್ಲಿ ಇದು ಮೊದಲ ಮಹತ್ವಪೂರ್ಣವಾದ ಹೆಜ್ಜೆಯಾಗಿದೆ. ಹಾಗೆಯೇ 1950ನೇ ಜುಲೈ 'ಕೆನರಾ ಬ್ಯಾಂಕ್ ನ್ಯೂಸ್'ನ ಪ್ರಥಮ ಅಂಕಣ ಪ್ರಕಾಶನಗೊಂಡಿತು.

1952ನೇ ಸಾಲಿನ ನವೆಂಬರ್ 19ರಂದು ಬ್ಯಾಂಕ್ ತನ್ನ ಮೊದಲ ವಿದೇಶಿ ವಿಭಾಗವನ್ನು ಮುಂಬಯಿಯಲ್ಲಿ ತೆರೆಯಲು ಪರವಾನಿಗೆ ಪಡೆಯಿತು.ಇದು ಬ್ಯಾಂಕಿನ ಇತಿಹಾಸದಲ್ಲಿಯೇ ಮಹತ್ವಪೂರ್ಣ ಘಟನೆಯಾಗಿ ದಾಖಲಾಯಿತು. ಫೆಬ್ರವರಿ 1954ರಲ್ಲಿ ಒಂದು ಹೊಸ ಮಾಸಿಕ ಪತ್ರಿಕೆ 'ವಿದೇಶಿ ಕಾರೋಬಾರ್ ಡೈಜೆಸ್ಟ್' ಪ್ರಕಟಗೊಂಡಿತು. ಇದರಲ್ಲಿ ಬ್ಯಾಂಕಿನ ಗ್ರಾಹಕರಿಗೆ ಉಪಯುಕ್ತ ಮಾಹಿತಿ ಒದಗಿಸಲಾಗಿತ್ತು.

1954 ಮಾರ್ಚ್ 31ರಂದು ಬ್ಯಾಂಕಿನ ಪ್ರಧಾನ ಕಚೇರಿಯನ್ನು ಮಂಗಳೂರಿನಿಂದ ಬೆಂಗಳೂರಿನ ವೆಂಕಪ್ಪ ಬಿಲ್ಡಿಂಗ್, ಮಾರ್ಕೆಟ್ ಸ್ಕೇಯರ್‌ನ ಎರಡನೇಯ ಮಹಡಿಗೆ ಸ್ಥಳಾಂತರಿಸಲಾಯಿತು. ಇದರ ಬಾಡಿಗೆ ತಿಂಗಳಿಗೆ ರೂಪಾಯಿ 2,100 ಆಗಿತ್ತು. 1958ನೇ ಸಾಲಿನಲ್ಲಿ ಬ್ಯಾಂಕ್, ಟೌನ್ ಹಾಲಿನ ಎದುರುಗಡೆ ಸ್ವಂತ ಜಾಗವನ್ನು ಖರೀದಿಸಿತು.ಇದು ಆಗಿನ ಮೈಸೂರು ಸರಕಾರದಿಂದ ಮಂಜೂರಾಗಿತ್ತು. 1955ರಲ್ಲಿಬ್ಯಾಂಕ್ ಮೂಲಕ 'ಥ್ರಿಫ್ಟ್ ಡಿಪಾಸಿಟ್ ಖಾತೆ' ಹೆಸರಿನ ಹೊಸ ರೀತಿಯ ಜಮಾರಾಶಿಯ ಯೋಜನೆ ಆರಂಭವಾಯಿತು. 1956ರಲ್ಲಿ ಬ್ಯಾಂಕಿನ ಸ್ವರ್ಣಮಹೋತ್ಸವವನ್ನು ಗ್ಲಾಸ್ ಹೌಸ್ ಲಾಲ್‌ಭಾಗ್ ಬೆಂಗಳೂರಿನಲ್ಲಿ ಅದ್ದೂರಿಯಿಂದ ಆಚರಿಸಲಾಯಿತು.

ಶ್ರೀ ಎ.ಡಿ.ಪೈ ಆ ಸಮಯದಲ್ಲಿ ಬ್ಯಾಂಕಿನ ಅಧ್ಯಕ್ಷರಾಗಿದ್ದರು. ಈ ಸಾಲಿನಲ್ಲಿ ಶೇರುದಾರರ ಸಂಖ್ಯೆ 2500 ಕ್ಕಿಂತಲೂ ಹೆಚ್ಚು ಇತ್ತು. ಬ್ಯಾಂಕಿನ ಉದ್ಯೋಗಿಗಳ ಸಂಖ್ಯೆ 1000ಕ್ಕಿಂತ ಹೆಚ್ಚು ಹಾಗೂ ಶಾಖೆಗಳು 51 ಆಗಿತ್ತು.

ಕೆನರಾ ಹೈಸ್ಕೂಲಿನ ಪ್ರಾರ್ಥನಾ ಮಂದಿರದ ನಿರ್ಮಾಣಕ್ಕಾಗಿ ಬ್ಯಾಂಕಿನಿಂದ ರೂಪಾಯಿ 10,000 ಅನುದಾನ ನೀಡಲಾಯಿತು.ಈ ಸಭಾಂಗಣಕ್ಕೆ "ಕೆನರಾ ಬ್ಯಾಂಕ್ ಸ್ವರ್ಣ ಜಯಂತಿ ಹಾಲ್" ಎಂದು ಹೆಸರು ಇಡಲಾಯಿತು. ಸಾಮಾನ್ಯ ಶೇರುದಾರರಿಗೆ ಪ್ರತಿ ಸಾಮಾನ್ಯ ಶೇರಿಗೆ 2.8.0 ಬೆಲೆಯಲ್ಲಿ ಎಡ್.ಇಂಟೆರಿಮ್ ತೆರಿಗೆ ಮುಕ್ತ ಡಿವಿಡೆಂಡ್ ಸ್ವರ್ಣ ಜಯಂತಿ ಪ್ರಯುಕ್ತ ನೀಡಲಾಯಿತು. ಉನ್ನತ ದರ್ಜೆಯ "ತಾಂತ್ರಿಕ ಮತ್ತು ವಿಜ್ಞಾನ ಶಿಕ್ಷಣ" ಹಾಗೂ ವಿವಿಧ ಶಿಕ್ಷಣವನ್ನು ಅಭಿವೃದ್ಧಿ ಹಾಗೂ ಹೆಚ್ಚಿಸಲು "ಕೆನರಾ ಬ್ಯಾಂಕ್ ಜ್ಯುಬಲಿ ಎಜುಕೇಶನ್ ಫಂಡ್" ಮೂಲಕ ಬುಕ್ ಬ್ಯಾಂಕನ್ನು ಸ್ಥಾಪಿಸಲಾಯಿತು. ಇದರಡಿಯಲ್ಲಿ ವಿದ್ಯಾರ್ಥಿಗಳಿಗೆ ಉತ್ಕೃಷ್ಟ

ಹಾಗೂ ಹೆಚ್ಚು ಬೆಲೆಯ ಪುಸ್ತಕಗಳನ್ನು ಓದಲು ಆಧಾರ ಗ್ರಂಥಗಳ ರೂಪದಲ್ಲಿ ನೀಡಲಾಗುತ್ತಿತ್ತು. 1961 ರಲ್ಲಿ "ಕೆನರಾ ಬ್ಯಾಂಕ್ ರಿಲೀಫ್ ಫಂಡ್ ವೆಲೆಫೇರ್ ಸೊಸೈಟಿ" (ಸಿ.ಬಿ.ಆರ್.ಡಬ್ಲ್ಯು.ಎಸ್)ನ್ನು ಬ್ಯಾಂಕಿನವರು ಆರಂಭಿಸಿದರು. ಇದಕ್ಕೆ "ಸೇವಾಕ್ಷೇತ್ರ" ಎಂದು ಕರೆಯಲಾಯಿತು.

ಅಂತೆಯೇ "ಸಿ.ಬಿ.ಆರ್.ಡಬ್ಲ್ಯು.ಎಸ್"ಮೂಲಕ "ಮಾತೃ ಛಾಯ" ನಡೆಸಲಾಗುತ್ತಿತ್ತು. ಇದರ ಮೂಲಕ ಅನಾಥ ಮಕ್ಕಳ ಪಾಲನೆ ತೆಗೆದುಕೊಳ್ಳಲಾಗುತ್ತಿತ್ತು. ಹಾಗೆಯೇ ಸೇವಾ ಮನೋಭಾವದಿಂದ ಆಸ್ಪತ್ರೆಗಳನ್ನು ನಡೆಸಿ, ಆರ್ಥಿಕ ದುರ್ಬಲರಿಗೆ ಕಡಿಮೆ ದರದಲ್ಲಿ ವೈದ್ಯಕೀಯ ಸೌಲಭ್ಯ ಒದಗಿಸಲಾಗುತ್ತಿತ್ತು. ಇಲ್ಲಿ ವೃದ್ಧಾಶ್ರಮವಿದ್ದು, ವಯೋವೃದ್ಧರ ಶುಶ್ರೂಷೆ ಮಾಡಲಾಗುತ್ತಿತ್ತು. ಕೆನರಾ ಬ್ಯಾಂಕಿನ ಸಂಸ್ಥಾಪಕ ಸುಬ್ಬರಾವ್ ಪೈಯವರ ಕನಸು. "ಸಮಾಜ ಹಾಗೂ ಸಾಮಾಜಿಕ ದೃಷ್ಟಿ ಯಿಂದಲೂ ಕೆನರಾ ಬ್ಯಾಂಕ್ ಮುಂಚೂಣಿಯಲ್ಲಿರಬೇಕು" ಎಂಬುದಾಗಿತ್ತು.

ಒಂದು ಸಣ್ಣ ಗಾತ್ರದ ನಿಧಿ ಸಂಗ್ರಹ ಅದು ದೇಶದಲ್ಲಿ ಬೃಹದಾಕಾರ ವಾಗಿ ಬೆಳೆದು ಇದು ಬ್ಯಾಂಕುಗಳ ಸಾಲಿನಲ್ಲಿ ಅರಳಿ ನಿಂತಿದೆ.

1969ರಲ್ಲಿ ರಾಷ್ಟ್ರೀಕರಣಗೊಂಡ 14 ಬ್ಯಾಂಕುಗಳಲ್ಲಿ ಕೆನರಾ ಬ್ಯಾಂಕ್ ಕೂಡಾ ಒಂದು ವಾಣಿಜ್ಯ ಬ್ಯಾಂಕ್. ಈ ಪ್ರಕಾರ 19ನೇ ಜುಲೈ 1969ಕ್ಕೆ ಬ್ಯಾಂಕಿನ ಅಧಿಕಾರವನ್ನು ಭಾರತ ಸರ್ಕಾರಕ್ಕೆ ಒಪ್ಪಿಸಲಾಯಿತು. ಈ ಸಾಲಿನಲ್ಲಿ ಕೆನರಾ ಬ್ಯಾಂಕಿನ ಮೊದಲನೇ ವಿದೇಶ ಶಾಖೆಯನ್ನು ವಿಶ್ವದ ಹೃದಯ ಭಾಗವಾದ ಲಂಡನ್‌ನಲ್ಲಿ ತೆರೆಯಲಾಯಿತು. 1996-1997ರಲ್ಲಿ ಬೆಂಗಳೂರು ಮತ್ತು ಹೊಸದಿಲ್ಲಿಯ ನಡುವೆ ಅಂತರ್‌ನಗರ್ ಎ.ಟಿ.ಎಂ. ನೆಟ್‌ವರ್ಕ್ ಬ್ಯಾಂಕಿಂಗ್ ಪ್ರಾರಂಭವಾಯಿತು. ಇದಾದ ಬಳಿಕ ಬ್ಯಾಂಕಿನ 201 ಶಾಖೆಗಳು ಪೂರ್ಣವಾಗಿ ಕಂಪ್ಯೂಟರೀಕರಣಗೊಂಡಿತ್ತು.

ಕೆನರಾ ಬ್ಯಾಂಕ್ ಮೂಲಕ ಮಾತೃಛಾಯಾ ಚೆಕ್, ಉಡುಗೊರೆ ಚೆಕ್, ಕೆನ್ ಕಾರ್ಡ್, ಕೆನ್ ಕಾರ್ಡ್ ವೀಸಾ, ಮಾಸ್ಟರ್ ಕಾರ್ಡ್ ಮೊದಲಾದ ಸೌಲಭ್ಯಗಳನ್ನು ಒದಗಿಸಲಾಯಿತು.

ಇಂದು ಕೆನರಾ ಬ್ಯಾಂಕ್ ದೇಶದ ಮೂಲೆ ಮೂಲೆಗಳಲ್ಲಿಯೂ ಶಾಖೆಯನ್ನು ಹೊಂದಿಕೊಂಡಿದೆ. 1906ರಲ್ಲಿ ಬ್ಯಾಂಕಿನ ಒಟ್ಟು ಉದ್ಯೋಗಿಗಳ ಸಂಖ್ಯೆ ಬರೀ 4 ಮಾತ್ರವಾಗಿತ್ತು. 2006ನೇ ಸಾಲಿನಲ್ಲಿ ಉದ್ಯೋಗಿಗಳ ಸಂಖ್ಯೆ 46,893 ಆಗಿದೆ. 2527 ಶಾಖೆಗಳು ಇರುವ ಕೆನರಾ ಬ್ಯಾಂಕಿನಲ್ಲಿ ಪ್ರಸ್ತುತ 12 ಡೈರೆಕ್ಟರ್‌ಗಳು ಕಾರ್ಯ ನಿರ್ವಹಿಸುತ್ತಿದ್ದಾರೆ.

**ಮೊದಲ ನಿರ್ದೇಶಕ ಮಂಡಳಿಯ ವಿವರ**

**ಕೆನರಾ ಹಿಂದೂ ಪರ್ಮನೆಂಟ್ ಫಂಡ್ ಲಿಮಿಟೆಡ್ ಮಂಗಳೂರು**

**ಜುಲೈ 01,1906ರಲ್ಲಿ**

| ಸಂಖ್ಯೆ | ಹೆಸರು | ವೃತ್ತಿ | ಸ್ಥಳ |
|---|---|---|---|
| 1. | ಶ್ರೀ ಅಮ್ಮೆಂಬಾಳ್ ಸುಬ್ಬರಾವ್ ಪೈ (ಬಿ.ಎ.ಬಿ.ಎಲ್) | ಹೈಕೋರ್ಟ್ ವಕೀಲರು | ಮಂಗಳೂರು |
| 2. | ಶ್ರೀ ಕೆ.ಪಿ.ರಾಮರಾವ್, (ಬಿ.ಎ.ಬಿ.ಎಲ್) ಕೋಶಾಧಿಕಾರಿ; ಕಾನೂನು ಸಲಹೆಗಾರರು | ಹೈಕೋರ್ಟ್ ವಕೀಲರು | ಮಂಗಳೂರು |
| 3. | ಶ್ರೀ ರಂಗಪ್ಪ ಭಂಡಾರಿ | ಪ್ರಥಮ ದರ್ಜೆ ಪ್ಲೀಡರ್ | ಮಂಗಳೂರು |
| 4. | ಶ್ರೀ ಎನ್. ಗಣಪತಿ ರಾವ್ | ವಕೀಲರು | ಮಂಗಳೂರು |
| 5. | ಶ್ರೀ ಎ. ಶ್ರೀನಿವಾಸ ಪೈ(ಬಿ.ಎ.ಬಿ.ಎಲ್) | ಹೆಡ್ ಮಾಸ್ಟರರು | ಮಂಗಳೂರು |
| 6. | ಶ್ರೀ ಎ. ವಾಸುದೇವ ರಾವ್ (ಬಿ.ಎ.ಎಲ್.ಟಿ) | ಕೆನರಾ ಹೈಸ್ಕೂಲ್ | ಮಂಗಳೂರು |
| 7. | ಶ್ರೀ ಎನ್. ದಾಮೋದರ ಶ್ಯಾನುಭೋಗ್ | ಸರಾಫರು | ಮಂಗಳೂರು |
| 8. | ಶ್ರೀ ಕಸ್ತೂರಿ ಸುಬ್ರಾಯ ಪೈ | ವ್ಯಾಪಾರಸ್ಥರು | ಮಂಗಳೂರು |

| ಸಂಖ್ಯೆ | ಹೆಸರು | ವೃತ್ತಿ | ಸ್ಥಳ |
|---|---|---|---|
| 9. | ಶ್ರೀ ಉಳ್ಳಾಲ ವಾಸುದೇವ ಮಲ್ಯ | ವ್ಯಾಪಾರಸ್ಥರು | ಮಂಗಳೂರು |
| 10. | ಶ್ರೀ ಎನ್. ನಾಗಪ್ಪ ನಾಯಕ್ | ವ್ಯಾಪಾರಸ್ಥರು | ಮಂಗಳೂರು |
| 11. | ಶ್ರೀ ಸಿ. ನರಸಿಂಹಯ್ಯ | ಸಾಹುಕಾರ್ | ಕುಂದಾಪುರ |
| 12. | ಶ್ರೀ ಆಗುಂಬೆ ವೆಂಕಟರಮಣಯ್ಯ | ಸಾಹುಕಾರ್ | ಕುಂದಾಪುರ |
| 13. | ಶ್ರೀ ಬೈಲೂರು ಮಂಜುನಾಥ ಶ್ಯಾನುಭೋಗ್ | ವ್ಯಾಪಾರಸ್ಥರು | ಕುಂದಾಪುರ |
| 14. | ಶ್ರೀ ಬಂಗ್ಲೆ ನಾರಾಯಣ ಕಾಮತ್ | ಕೃಷಿಕ | ಮುಲ್ಕಿ |
| 15. | ಶ್ರೀ ಕೊಲಕೆರೆ ರಾಮ ನಾಯಕ್ | ಕೃಷಿಕ | ಮುಲ್ಕಿ |
| 16. | ಶ್ರೀ ಎಂ. ವೈಕುಂಠ ಭಕ್ತ | ಕೃಷಿಕ | ಮುಲ್ಕಿ |
| 17. | ಶ್ರೀ ಕೆ. ಪಿ. ಅಚ್ಯುತಯ್ಯ | ಪ್ಲೀಡರ್ | ಮಂಗಳೂರು |
| 18. | ಶ್ರೀ ಕೆ. ಶ್ರೀನಿವಾಸ ಕಾಮತ್ | ವ್ಯಾಪಾರಿ | ಮಂಗಳೂರು |

## ಕೆನರಾ ಹಿಂದೂ ಪರ್ಮನೆಂಟ್ ಫಂಡ್ ಲಿಮಿಟೆಡ್ ಮಂಗಳೂರು
## ಪ್ರಥಮ ವಾರ್ಷಿಕ ವರದಿ
**(ದಿನಾಂಕ 1-07-1906ರಿಂದ 31-03-1907, 9 ತಿಂಗಳುಗಳದ್ದು)**

| ಸಂಖ್ಯೆ | ವಿಷಯ | ರೂಪಾಯಿ | ಪೈಸೆಗಳಲ್ಲಿ | |
|---|---|---|---|---|
| 1. | ಬಂಡವಾಳ | 54,045 | 0 | 0 |
| 2. | ಒಟ್ಟು ಠೇವಣಿ | 42,419 | 15 | 9 |
| | 1) ನಿರಖು ಠೇವಣಿ | 19,160 | 0 | 0 |
| | 2) ಚಾಲ್ತಿ ಠೇವಣಿ | 23,259 | 15 | 9 |
| 3. | ಸಾಲ | 83,716 | 0 | 0 |
| 4. | ಸಂಬಳ (ಸ್ಥಾಪನೆಗಾಗಿ) | 336 | 12 | 2 |
| 5. | ಲಾಭ | 3,838 | 15 | 11 |
| 6. | ನಿವ್ವಳ ಲಾಭ | 2,420 | 11 | 9 |

[ನಿವ್ವಳ ರೂಪಾಯಿ 2,420-11-9ರಿಂದ ರೂಪಾಯಿ 112-0-0 ರಿಸರ್ವ್ ಫಂಡ್ ವರ್ಗಾವಣೆ]

## 1906 ರಿಂದ 2006 ರವರೆಗಿನ ಕೆನರಾ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಮತ್ತು ಅಧ್ಯಕ್ಷರುಗಳ ಹೆಸರು

| ಸಂಖ್ಯೆ | ಛೇರ್‌ಮೇನ್ | ವರ್ಷ |
|---|---|---|
| 1. | ಅಮ್ಮೆಂಬಾಳ್ ಸುಬ್ಬರಾವ್ ಪೈ | 1906-1909 |
| 2. | ವೆಂಕಟರಮಣ ಪೈ | 1909-1916 |
| 3. | ವಿ. ರಾಮ ರಾವ್ | 1917-1918 |
| 4. | ಎ. ಶ್ರೀನಿವಾಸ ಪೈ | 1918-1942 |
| 5. | ಬಿ. ವೆಂಕಟರಾವ್ ಬಾಳಿಗ | 1942-1945 |
| 6. | ಎ. ದಾಮೋದರ್ ಪೈ | 1945-1962 |
| 7. | ಕೆ. ಪಿ. ಜೆ. ಪ್ರಭು | 1962-1973 |
| 8. | ಸಿ. ಇ. ಕಾಮತ್ | 1973-1982 |
| 9. | ಬಿ. ರತ್ನಾಕರ್ | 1982-1988 |
| 10. | ಎನ್. ಡಿ. ಪ್ರಭು | 1988-1992 |
| 11. | ಜೆ. ವಿ. ಶೆಟ್ಟಿ | 1992-1997 |
| 12. | ಟಿ. ಆರ್. ಶ್ರೀಧರನ್ | 1997-1999 |
| 13. | ಆರ್. ಜೆ. ಕಾಮತ್ | 2000-2001 |
| 14. | ಆರ್. ವಿ: ಶಾಸ್ತ್ರೀ | 2001-2004 |
| 15. | ವಿ. ಪಿ. ಶೆಟ್ಟಿ | 2004-2005 |
| 16. | ಶ್ರೀ ಎಮ್. ಬಿ. ಎನ್. ರಾವ್ | 2005- |

## ಕೆನರಾ ಬ್ಯಾಂಕ್: ಪ್ರಾರಂಭವಾದಾಗಿನಿಂದ ಕೆಲವು ಆಯ್ದ ಸೂಚ್ಯಂಕಗಳು

(1907-1942 ಮೌಲ್ಯ ಸಾವಿರ ರೂಪಾಯಿಗಳಲ್ಲಿ) (1943-1977 ಮೌಲ್ಯ ಕೋಟಿ ರೂಪಾಯಿಗಳಲ್ಲಿ)

| ವರ್ಷ | ಠೇವಣಿ | ಸಾಲ | ಲಾಭ | ಆದಾಯ (ಆಯ) | ಪೇಯ್ಡ್ ಆಫ್ ಕೆಪಿಟಲ್ | ರಿಸರ್ವ್ | ಶಾಖೆಗಳ ಸಂಖ್ಯೆ | ಉದ್ಯೋಗಿಗಳ ಸಂಖ್ಯೆ |
|---|---|---|---|---|---|---|---|---|
| 1907 | 42.40 | 83.70 | 2.40 | 3.80 | 54.00 | 0.00 | 1 | |
| 1908 | 104.70 | 185.40 | 6.80 | 12.00 | 90.40 | 0.10 | 1 | |
| 1909 | 148.30 | 284.60 | 9.30 | 19.40 | 124.20 | 1.20 | 1 | |
| 1910 | 233.80 | 383.30 | 15.30 | 31.20 | 137.50 | 2.50 | 1 | |
| 31-3-'10 | 262.90 | 405.00 | 11.90 | 23.70 | 151.10 | 5.60 | 1 | |
| 31-3-'11 | 342.80 | 488.40 | 20.60 | 39.20 | 166.50 | 8.60 | 1 | |
| 1912 | 437.20 | 603.30 | 21.10 | 44.00 | 175.00 | 17.40 | 1 | |
| 1913 | 515.80 | 728.10 | 33.50 | 60.50 | 175.00 | 22.50 | 1 | |
| 1914 | 477.90 | 680.00 | 33.50 | 62.60 | 192.40 | 28.40 | 1 | |
| 1915 | 424.10 | 611.90 | 31.20 | 57.20 | 194.10 | 34.40 | 1 | |
| 1916 | 360.40 | 632.00 | 31.20 | 55.50 | 200.00 | 41.40 | 1 | |
| 1917 | 348.60 | 629.00 | 35.50 | 57.60 | 219.60 | 51.40 | 1 | |
| 1918 | 459.00 | 792.50 | 37.90 | 63.40 | 297.60 | 75.20 | 1 | |
| 1919 | 791.80 | 1181.10 | 45.30 | 88.20 | 300.00 | 86.40 | 1 | |
| 1920 | 899.00 | 1306.70 | 56.10 | 115.80 | 300.00 | 103.60 | 1 | |
| 1921 | 1222.10 | 1646.80 | 57.50 | 135.00 | 300.00 | 126.60 | 1 | |
| 1922 | 1607.60 | 2065.90 | 64.70 | 170.10 | 300.00 | 135.40 | 1 | |
| 1923 | 1632.10 | 2115.30 | 72.10 | 187.90 | 300.00 | 153.50 | 1 | |
| 1924 | 1810.70 | 2345.40 | 75.00 | 204.50 | 300.00 | 172.50 | 1 | |
| 1925 | 1955.50 | 2489.00 | 79.20 | 224.10 | 300.00 | 193.60 | 1 | |
| 1926 | 2508.90 | 2996.20 | 72.60 | 237.50 | 300.00 | 214.10 | 3 | |
| 1927 | 3095.30 | 3504.70 | 68.50 | 281.60 | 300.00 | 239.20 | 3 | |
| 1928 | 3742.30 | 3845.20 | 99.70 | 358.40 | 300.00 | 255.70 | 6 | |
| 1929 | 4666.70 | 3942.50 | 98.00 | 420.70 | 300.00 | 285.00 | 8 | |

| ವರ್ಷ | ಠೇವಣಿ | ಸಾಲ | ಲಾಭ | ಆದಾಯ (ಆಯ) | ಪೇಯ್ಡ ಆಫ್ ಕೆಪಿಟಲ್ | ರಿಸರ್ವ್ | ಶಾಖೆಗಳ ಸಂಖ್ಯೆ | ಉದ್ಯೋಗಿಗಳ ಸಂಖ್ಯೆ |
|---|---|---|---|---|---|---|---|---|
| 1930 | 5719.40 | 4988.50 | 107.50 | 507.10 | 300.00 | 302.00 | 10 | |
| 1931 | 5480.60 | 4121.40 | 85.50 | 506.40 | 300.00 | 489.50 | 10 | |
| 1932 | 5546.40 | 3683.90 | 55.50 | 571.90 | 300.00 | 412.60 | 12 | |
| 1933 | 5767.00 | 4486.90 | 54.60 | 444.90 | 330.00 | 311.40 | 15+1* | |
| 1934 | 5862.50 | 4611.90 | 60.10 | 414.80 | 331.00 | 325.00 | 15+1* | |
| 1935 | 6192.90 | 4517.60 | 65.10 | 404.50 | 333.20 | 326.50 | 19 | |
| 1936 | 7964.40 | 5510.00 | 66.40 | 440.40 | 333.20 | 328.50 | 28 | |
| 1937 | 8396.40 | 6270.50 | 68.30 | 527.30 | 333.20 | 328.50 | 36 | |
| 1938 | 8403.30 | 6381.80 | 67.40 | 554.50 | 362.60 | 228.50 | 37 | |
| 1939 | 8121.60 | 5128.40 | 55.00 | 504.10 | 391.30 | 250.00 | 37 | |
| 1940 | 8671.80 | 4717.30 | 71.70 | 293.10 | 392.50 | 250.00 | 37 | |
| 1941 | 9606.10 | 5165.90 | 57.40 | 479.70 | 421.70 | 250.00 | 37 | |
| 1942 | 14550.50 | 7552.90 | 153.30 | 602.50 | 1496.10 | 250.00 | 35 | |
| 1943 | 1.98 | 0.93 | 0.03 | 0.08 | 0.22 | 0.05 | 30 | |
| 1944 | 2.31 | 1.43 | 0.03 | 0.09 | 0.26 | 0.08 | 30 | |
| 1945 | 3.50 | 1.57 | 0.04 | 0.13 | 0.28 | 0.01 | 38 | |
| 1946 | 4.60 | 2.01 | 0.04 | 0.18 | 0.29 | 0.10 | 45 | |
| 1947 | 5.26 | 2.03 | 0.04 | 0.22 | 0.29 | 0.11 | 40 | |
| 1948 | 6.02 | 2.77 | 0.06 | 0.25 | 0.29 | 0.11 | 41 | |
| 1949 | 7.07 | 2.82 | 0.06 | 0.27 | 0.29 | 0.11 | 40 | |
| 1950 | 7.50 | 3.47 | 0.07 | 0.30 | 0.29 | 0.12 | 42 | |
| 1951 | 7.48 | 3.21 | 0.07 | 0.33 | 0.29 | 0.15 | 44 | |
| 1952 | 7.32 | 2.82 | 0.08 | 0.35 | 0.29 | 0.16 | 44 | |
| 1953 | 7.90 | 3.98 | 0.09 | 0.40 | 0.29 | 0.21 | 46 | |
| 1954 | 8.92 | 4.32 | 0.09 | 0.46 | 0.29 | 0.26 | 46 | |
| 1955 | 11.96 | 6.09 | 0.10 | 0.55 | 0.29 | 0.29 | 51 | |

| ವರ್ಷ | ಠೇವಣಿ | ಸಾಲ | ಲಾಭ | ಆದಾಯ (ಆಯ) | ಪೇಯ್ಡ್ ಆಫ್ ಕೆಪಿಟಲ್ | ರಿಸರ್ವ್ | ಶಾಖೆಗಳ ಸಂಖ್ಯೆ | ಉದ್ಯೋಗಿಗಳ ಸಂಖ್ಯೆ |
|---|---|---|---|---|---|---|---|---|
| 1956 | 14.32 | 7.73 | 0.12 | 0.74 | 0.29 | 0.32 | 52 | 1081 |
| 1957 | 17.84 | 8.79 | 0.15 | 0.92 | 0.29 | 0.40 | 61 | 1222 |
| 1958 | 23.76 | 10.93 | 0.14 | 1.22 | 0.50 | 0.45 | 68 | 1410 |
| 1959 | 28.93 | 15.88 | 0.18 | 1.56 | 0.50 | 0.50 | 76 | 1692 |
| 1960 | 30.82 | 16.63 | 0.20 | 1.72 | 0.50 | 0.56 | 84 | 2002 |
| 1961 | 37.56 | 20.39 | 0.21 | 1.97 | 0.50 | 0.63 | 115 | 2691 |
| 1962 | 50 88 | 26.92 | 0.21 | 2.65 | 0.75 | 0.76 | 119 | 3024 |
| 1963 | 72.27 | 42.27 | 0.24 | 3.46 | 1.00 | 1.10 | 238 | 4522 |
| 1964 | 88 24 | 58.59 | 0.35 | 4.96 | 1.00 | 1.23 | 242 | 4768 |
| 1965 | 98.98 | 59.57 | 0.36 | 6.40 | 1.25 | 1.58 | 239 | 5124 |
| 1966 | 114 04 | 66.39 | 0.36 | 7.85 | 1.25 | 1.62 | 241 | 5374 |
| 1967 | 126 56 | 80.35 | 0.40 | 9.29 | 1.25 | 1.44 | 247 | 5594 |
| 1968 | 146 44 | 96.72 | 0.45 | 10.42 | 1.50 | 1.53 | 302 | 6226 |
| 1969 | 185 24 | 125.47 | 0.55 | 12.58 | 1.75 | 1.82 | 368 | 7198 |
| 1970 | 239.92 | 168 98 | 1.03 | 17.17 | 1.75 | 2.03 | 504 | 8876 |
| 1971 | 294.11 | 185.33 | 1.39 | 22.61 | 1.75 | 2.39 | 601 | 10415 |
| 1972 | 365 30 | 226.80 | 1.46 | 27.67 | 1.75 | 2.69 | 688 | 12382 |
| 1973 | 443.98 | 282.15 | 1.47 | 36.30 | 1.75 | 3.00 | 739 | 14359 |
| 1974 | 548 63 | 356.65 | 1.89 | 53.69 | 1.75 | 3.47 | 813 | 15422 |
| 1975 | 706.91 | 477.11 | 1.94 | 68.24 | 1.75 | 4.80 | 906 | 16472 |
| 1976 | 900.36 | 661.91 | 2.33 | 91.69 | 1.75 | 6.25 | 1015 | 18763 |
| 1977 | 1083.51 | 713.14 | 2.81 | 114.08 | 1.75 | 7.60 | 1102 | 21393 |
| 1978 | 1361.44 | 845.21 | 3.21 | 121.08 | 5.00 | 6.00 | 1162 | 24065 |
| 1979 | 1572.42 | 1021.32 | 3.76 | 150.93 | 5.00 | 8.00 | 1201 | 26419 |
| 1980 | 2099.06 | 1172.29 | 4.26 | 184.75 | 5.00 | 10.00 | 1284 | 29035 |
| 1981 | 2545.81 | 1448.61 | 4.47 | 224.21 | 5.00 | 12.50 | 1355 | 32200 |

| ವರ್ಷ | ಠೇವಣಿ | ಸಾಲ | ಲಾಭ | ಆದಾಯ (ಆಯ) | ಪೇಯ್ಡ್ ಆಫ್ ಕೆಪಿಟಲ್ | ರಿಸರ್ವ್ | ಶಾಖೆಗಳ ಸಂಖ್ಯೆ | ಉದ್ಯೋಗಿಗಳ ಸಂಖ್ಯೆ |
|---|---|---|---|---|---|---|---|---|
| 1982 | 3036.93 | 1726.08 | 4.57 | 268.87 | 5.00 | 15.00 | 1393 | 35790 |
| 1983 | 3448.81 | 2140.26 | 4.96 | 335.94 | 7.00 | 30.00 | 1444 | 39722 |
| 1984 | 4324.53 | 2813.84 | 5.51 | 443.48 | 7.00 | 48.00 | 1526 | 42818 |
| 1985 | 5628.22 | 3560.23 | 11.01 | 583.98 | 29.50 | 70.40 | 1841 | 46640 |
| 1986 | 6818.39 | 4168.40 | 18.16 | 723.47 | 41.50 | 120.00 | 1844 | 48079 |
| 1987 | 7878.43 | 4659.28 | 44.97 | 907.85 | 41.50 | 200.00 | 1864 | 48404 |
| ಜನವರಿ 1988 | 9340.65 | 5801.95 | 54.94 | 1353.64 | 48.95 | 295.00 | 1946 | 49395 |
| ಮಾರ್ಚ್ 1989 | | | | | | | | |
| 89-90 | 10922.67 | 6498.48 | 61.27 | 1315.08 | 57.91 | 400.00 | 2006 | 50904 |
| 90-91 | 12368.05 | 7073.05 | 136.04 | 1705.60 | 75.24 | 525.00 | 2020 | 51109 |
| 91-92 | 14238.15 | 7999.85 | 156.59 | 2083.02 | 114.24 | 665.00 | 2026 | 51600 |
| 92-93 | 16446.07 | 8042.15 | 26.07 | 2406.95 | 207.92 | 868.65 | 2048 | 52037 |
| 93-94 | 19838.94 | 8284.99 | 120.35 | 2388.09 | 588.79 | 976.93 | 2089 | 52825 |
| 94-95 | 22475.11 | 10878.26 | 204.10 | 2759.36 | 590.15 | 1144.24 | 2136 | 53327 |
| 95-96 | 26243.00 | 13096.00 | 253.00 | 3382.00 | 485.00 | 1446.00 | 2192 | 54044 |
| 97-98 | 39045.00 | 16825.00 | 203.00 | 4431.00 | 578.00 | 1725.00 | 2312 | 54703 |
| 98-99 | 41959.00 | 19530.00 | 225.00 | 5319.00 | 578.00 | 1835.00 | 2379 | 55097 |
| 99-'00 | 48001.00 | 23547.00 | 236.00 | 5687.00 | 578.00 | 2018.00 | 2397 | 55363 |
| '00-'01 | 59070.00 | 27832.00 | 285.00 | 6536.00 | 578.00 | 2237.00 | 2405 | 48257 |
| '01-'02 | 64030.00 | 33127.00 | 741.00 | 7799.00 | 578.00 | 2894.00 | 2409 | 47796 |
| '02-'03 | 72095.00 | 40472.00 | 1019.00 | 8170.00 | 410.00 | 3739.00 | 2424 | 47566 |
| '03-'04 | 86345.00 | 47639.00 | 1338.00 | 9080.00 | 410.00 | 4842.00 | 2469 | 47613 |
| '04-'05 | 96908 | 60421 | 1110 | 9116 | 410.00 | 5699 | 2513 | 47389 |

# ಕೆನರಾ ಬ್ಯಾಂಕಿನ ಶತಮಾನೋತ್ಸವ, 2006

ಕೆನರಾ ಬ್ಯಾಂಕಿನ ಈಗಿನ ಅಧ್ಯಕ್ಷರು ಮತ್ತು ನಿರ್ದೇಶಕರು ಆದ ಶ್ರೀ ಎಂ.ಬಿ.ಎನ್. ರಾವ್ ಹಾಗೂ ಡೈರೆಕ್ಟರ್‌ಗಳು ಕೆನರಾ ಬ್ಯಾಂಕಿನ ಜನ್ಮ ಶತಾಬ್ದಿಯನ್ನು ಬಹಳ ವಿಜೃಂಭಣೆಯಿಂದ ಆಚರಿಸಲು ನಿರ್ಧರಿಸಿ ಕಾರ್ಯಕ್ರಮದ ಉದ್ಘಾಟನೆಯನ್ನು 2005 ಜುಲಾಯಿಯಲ್ಲಿ ಈಗಿನ ವಿತ್ತ ಸಚಿವ ಶ್ರೀ ಚಿದಂಬರಂ ಅವರ ಅಧ್ಯಕ್ಷತೆಯಲ್ಲಿ ಬೆಂಗಳೂರಿನ ಕೋರಮಂಗಲದಲ್ಲಿ ನೆರವೇರಿಸಲಾಯಿತು. ಇದೇ ವರ್ಷದ 19ನೇ ನವಂಬರ್ ತಿಂಗಳಲ್ಲಿ ಧರ್ಮಸ್ಥಳ ಶ್ರೀ ವೀರೇಂದ್ರ ಹೆಗ್ಗಡೆಯವರ ಅಧ್ಯಕ್ಷತೆಯಲ್ಲಿ ಟಿ.ಎಂ.ಎ. ಪೈಯವರ ಸುಸಜ್ಜಿತ ಸಭಾಂಗಣದಲ್ಲಿ ಸಂಸ್ಥಾಪಕರ ದಿನಾಚರಣೆ ಮತ್ತು ಶತಮಾನೋತ್ಸವ ದಿನಾಚರಣೆಯನ್ನು ಬಹಳ ವಿಜೃಂಭಣೆಯಿಂದ ನೆರವೇರಿಸಲಾಯಿತು. ಸಂಸ್ಥಾಪಕರ ಡೊಂಗರಕೇರಿಯ ಮನೆ, ಹಾಗೂ ಪ್ರಾರಂಭದ ಕೆನರಾ ಬ್ಯಾಂಕ್ ಮತ್ತು ಇಂದಿನ ವಸ್ತುಸಂಗ್ರಾಹಲಯವನ್ನು ನವೀಕರಣಗೊಳಿಸಿ ರಿಸರ್ವ್ ಬ್ಯಾಂಕ್ ಡೆಪ್ಯೂಟಿ ಗವರ್ನರ್ ಆದ ಲೀಲಾಧರ್ ಇವರಿಂದ ಉದ್ಘಾಟಿಸಲಾಯಿತು. ದೇಶ-ವಿದೇಶಗಳ ಶಾಖೆಗಳಲ್ಲಿ ಅದೇ ದಿನ ವಿಜೃಂಭಣೆಯಿಂದ ಶತಮಾನೋತ್ಸವವನ್ನು ಆಚರಿಸಲಾಯಿತು. ಪ್ರತೀ ತಿಂಗಳು ಕೆನರಾ ಬ್ಯಾಂಕಿನ ಒಂದೊಂದು ಸರ್ಕಲ್‌ನಲ್ಲಿ ವಿಶಿಷ್ಟ ರೂಪದಲ್ಲಿ ಈ ಕಾರ್ಯಕ್ರಮವನ್ನು ನಡೆಸುವ ನಿರ್ಧಾರ ಮಾಡಲಾಯಿತು. ಶತಮಾನೋತ್ಸವ ದಂದು ಪೈಯವರ ಅಪೇಕ್ಷೆಯಂತೆ ಅನಾಥಾಶ್ರಮಶಾಲೆ, ದೇವಸ್ಥಾನ, ಆಸ್ಪತ್ರೆ, ಶಿಕ್ಷಣ ಸಂಸ್ಥೆಗಳಿಗೆ ಉದಾರ ದಾನ ಮಾಡಲಾಯಿತು. ಅದರಲ್ಲಿಯೂ ಶ್ರೀ ವೆಂಕಟರಮಣ ದೇವಸ್ಥಾನದಿಂದ ನಡೆಸುವ ಮುಲ್ಕಿಯ ಮಹರ್ಷಿ ಶಾಲೆಗೆ ರೂ. 10 ಲಕ್ಷ ಕೊಟ್ಟದ್ದನ್ನು ಸ್ಮರಿಸಬಹುದು. 20 ನವಂಬರ್ 2005ರಂದು ಕೆನರಾ ಕಾಲೇಜಿನಲ್ಲಿ ಶತಮಾನೋತ್ಸವ ಶಾಖೆ ಮತ್ತು ಎ.ಟಿ.ಎಂ.ನ್ನು ಕೆನರಾ ಬ್ಯಾಂಕಿನ ಅಧ್ಯಕ್ಷರಾದ ಎಂ.ಬಿ.ಎನ್.ರಾವ್ ಇವರು ಉದ್ಘಾಟಿಸಿದರು.



ಮಂಗಳೂರು ಡೊಂಗರಕೇರಿಯಲ್ಲಿರುವ
ಕೆನರಾ ಬ್ಯಾಂಕಿನ ಸ್ಥಾಪಕರ ಶಾಖೆ



ಮಂಗಳೂರಿನ ಕೆನರಾ ಕಾಲೇಜಿನಲ್ಲಿರುವ ಬ್ಯಾಂಕಿನ ಶತಮಾನೋತ್ಸವ ಶಾಖೆ




1-7-2005ನಲ್ಲಿ ಬೆಂಗಳೂರಿನಲ್ಲಿ ನಡೆದ ಕೆನರಾ ಬ್ಯಾಂಕಿನ ಶತಮಾನೋತ್ಸವ ಕಾರ್ಯಕ್ರಮದಲ್ಲಿ ಪಾಲ್ಗೊಂಡ
ಮಾನ್ಯ ವಿತ್ತ ಸಚಿವರು ಪಿ. ಚಿದಂಬರಂ, ಮಾನ್ಯ ಮುಖ್ಯಮಂತ್ರಿ ಎನ್. ಧರ್ಮಸಿಂಗ್ ಮತ್ತು
ಬ್ಯಾಂಕಿನ ಆಡಳಿತ ನಿರ್ದೇಶಕ ಶ್ರೀ ಎಮ್. ವಿ.ಎಸ್. ರಾವ್



ಕೆನರಾ ಬ್ಯಾಂಕಿನ ಪ್ರಾಯೋಜಕತ್ವದಲ್ಲಿ ಬೀಕೋನ್'98






ಬೆಂಗಳೂರಿನಲ್ಲಿ ರಾಷ್ಟ್ರಪತಿ ಡಾ| ರಾಜೇಂದ್ರ ಪ್ರಸಾದ್‌ರವರಿಂದ
ಕೆನರಾ ಬ್ಯಾಂಕಿನ ಆಡಳಿತ ಕಛೇರಿಯ ಶಂಕುಸ್ಥಾಪನೆ






1926ರಲ್ಲಿ ಕಾರ್ಕಳದಲ್ಲಿ ಪ್ರಾರಂಭಗೊಂಡ
ಕೆನರಾ ಬ್ಯಾಂಕಿನ ಮೊದಲ ಶಾಖೆ



1945ರಲ್ಲಿ ಪ್ರಥಮವಾಗಿ ನಿಯುಕ್ತಿಗೊಂಡ
ಕೆನರಾ ಬ್ಯಾಂಕಿನ ಮಹಿಳಾ ಸಿಬ್ಬಂದಿಗಳು.



ಮಿ. ಫ್ರೀಮ್ಯಾನ್‌ರವರಿಂದ 1953ರಲ್ಲಿ ಮುಂಬಯಿಯಲ್ಲಿ ಪ್ರಾರಂಭಗೊಂಡ
ಬ್ಯಾಂಕಿನ ವಿದೇಶೀ ವ್ಯವಹಾರ ವಿಭಾಗದ ಉದ್ಘಾಟನೆ



ಮಾನ್ಯ ಪ್ರಧಾನಮಂತ್ರಿ
ಶ್ರೀಮತಿ ಇಂದಿರಾ ಗಾಂಧಿಯವರಿಂದ ಬ್ಯಾಂಕಿಗೆ ಭೇಟಿ



ರಾಷ್ಟ್ರಪತಿ ವಿ.ವಿ. ಗಿರಿಯವರು ಕೆನರಾ ಬ್ಯಾಂಕಿಗೆ ಭೇಟಿ



ಆರ್. ವೆಂಕಟ್ರಾಮನ್ ಮಾನ್ಯ ವಿತ್ತ ಸಚಿವರು
ಕೆನರಾ ಬ್ಯಾಂಕಿಗೆ ಭೇಟಿ ಕೊಟ್ಟ ಸಂದರ್ಭ



ಮೈಸೂರಿನ ಮಹಾರಾಜರು ಬ್ಯಾಂಕಿಗೆ ಭೇಟಿ ಕೊಟ್ಟ ಸಂದರ್ಭ

## ಈಗ ಕೆನರಾ ಬ್ಯಾಂಕ್

ಪ್ರಸ್ತುತ ಕೆನರಾ ಬ್ಯಾಂಕ್ ಸುಮಾರು 2542 ಶಾಖೆಗಳನ್ನು ಹೊಂದಿದ್ದು, 25ರಾಜ್ಯ ಹಾಗೂ 4 ಕೇಂದ್ರಾಡಳಿತ ಪ್ರದೇಶಗಳಲ್ಲಿ ಹಬ್ಬಿದ್ದು, ಒಂದು ಶಾಖೆಯು ಲಂಡನ್ ನಗರದಲ್ಲಿದೆ. ಈ ಎಲ್ಲಾ ಶಾಖೆಗಳೂ ಈ ಕೆಳಗಿನವುಗಳಿಂದ ನಿಯಂತ್ರಿಸಲ್ಪಡುತ್ತದೆ.

ಬೆಂಗಳೂರಿನಲ್ಲಿರುವ ಪ್ರಧಾನ ಕಚೇರಿ

30 ವಲಯ ಕಚೇರಿಗಳು ಮತ್ತು ಒಂದು ಅಂತರ್‌ರಾಷ್ಟ್ರೀಯ ವಿಭಾಗ

17 ಪ್ರಾದೇಶಿಕ ಕಚೇರಿಗಳು

**ಹಿಂದಿನ 13 ವಲಯ ಕಚೇರಿಗಳ ವಿವರ**

1. ಮಂಗಳೂರು
2. ಮಧುರೈ
3. ಚೆನ್ನೈ
4. ಹೈದರಾಬಾದ್
5. ಮುಂಬೈ ನಗರ
6. ಉತ್ತರ ಮುಂಬೈ
7. ಬೆಂಗಳೂರು
8. ಪಾಟ್ನಾ
9. ಕೋಲ್ಕತ್ತಾ
10. ತಿರುವನಂತಪುರ
11. ಲಕ್ನೋ
12. ಚಂಡೀಗಢ
13. ದೆಹಲಿ

**ಶಾಖೆಗಳು ಹಾಗೂ ವಿದೇಶಿ ಕಚೇರಿಗಳ ವಿವರ**

ಅನಿವಾಸಿ ಭಾರತೀಯರ ಸೌಲಭ್ಯಕ್ಕಾಗಿ ಬ್ಯಾಂಕ್ 1976ರಲ್ಲಿ ಒಂದು ಅಂತರ್ ರಾಷ್ಟ್ರೀಯ ವಿಭಾಗವನ್ನು ಸ್ಥಾಪಿಸಿರುತ್ತದೆ. ವಿದೇಶಿ ನೆಲದಲ್ಲಿ ಹೆಚ್ಚಿನ ಸಾಧನೆಯನ್ನು ಮಾಡದಿದ್ದರೂ, ಬ್ಯಾಂಕು ಅನಿವಾಸಿ ಭಾರತೀಯರನ್ನು ತನ್ನತ್ತ ಆಕರ್ಷಿಸುವಲ್ಲಿ ಒಳ್ಳೆಯ ಸಾಧನೆ ಮಾಡಿರುತ್ತದೆ.

**ವಿದೇಶದಲ್ಲಿರುವ ಕಚೇರಿಗಳ ವಿವರ:-**

- ಕೆನರಾ ಬ್ಯಾಂಕ್, ಲಂಡನ್, ಯುನೈಟೆಡ್ ಕಿಂಗ್ಡಮ್(ಶಾಖೆ)
- ಇಂಡೋ ಹಾಂಗ್ ಕಾಂಗ್ ಅಂತರ್ ರಾಷ್ಟ್ರೀಯ ಹಣಕಾಸು ಕಂಪೆನಿ ನಿಯಮಿತ, ಹಾಂಗ್ ಕಾಂಗ್(ಅಂಗಸಂಸ್ಥೆ)
- ಕಮರ್ಶಿಯಲ್ ಬ್ಯಾಂಕ್ ಆಫ್ ಇಂಡಿಯಾ ಎಲ್‌ಎಲ್‌ಸಿ, ಮಾಸ್ಕೋ
- ಕೆನರಾ ಬ್ಯಾಂಕ್, ಶಾಂಗ್ಯಾ (ಪ್ರತಿನಿಧಿ ಕಚೇರಿ)
- ಆಲ್-ರಜೌಕಿ ಅಂತರ್ ರಾಷ್ಟ್ರೀಯ ವಿನಿಮಯ ಕಂಪೆನಿ, ದುಬೈ, ಯು.ಎ.ಇ.
- ಪೂರ್ವ-ವಿನಿಮಯ ಸಂಸ್ಥೆ, ದೋಹಾ, ಕತಾರ್(ನಿರ್ವಹಣಾ-ಒಪ್ಪಂದ ಮತ್ತು ಡಿ.ಡಿ. ಸೌಲಭ್ಯ)

ಅದಲ್ಲದೆ, ಈ ಕೆಳಗಿನ ವಿನಿಮಯ ಸಂಸ್ಥೆಗಳೊಂದಿಗೆ ಕೆನರಾ ಬ್ಯಾಂಕ್ ಡಿ.ಡಿ. ಸೌಲಭ್ಯವನ್ನು ನೀಡುವ ಒಪ್ಪಂದ ಮಾಡಿರುತ್ತದೆ.

- ಆಲ್ ಅಹಾಲಿಯಾ ಮನಿ ಎಕ್ಸ್‌ಚೇಂಜ್ ಬ್ಯೂರೋ, ಅಬುದಾಬಿ, ಯು.ಎ.ಇ.
- ಆಲ್ ಅನ್ಸಾರಿ ಎಕ್ಸ್‌ಚೇಂಜ್ ಎಸ್ಟಾಬ್ಲಿಷ್‌ಮೆಂಟ್, ಅಬುದಾಬಿ, ಯು.ಎ.ಇ.
- ಆಲ್-ಫರ್ದಾನ್ ಎಕ್ಸ್‌ಚೇಂಜ್ ಕಂಪೆನಿ, ಅಬುದಾಬಿ, ಯು.ಎ.ಇ.
- ಬೆಹರಿನ್ ಎಕ್ಸ್‌ಚೇಂಜ್ ಕೊ. ಡಬ್ಲ್ಯೂಎಲ್‌ಎಲ್, ಸಫತ್, ಕುವೈಟ್

- ಬೆಹರಿನ್ ಫೈನಾನ್ಸಿಂಗ್ ಕಂಪನಿ, ಮನಾಮ, ಬೆಹರಿನ್
- ಬೆಹರಿನ್ ಇಂಡಿಯಾ ಇಂಟರ್‌ನ್ಯಾಶನಲ್ ಎಕ್ಸ್‌ಚೇಂಜ್ ಕೊ., ಬಿಎಸ್‌ಸಿ, ಬೆಹರಿನ್
- ಡೊಲ್ಲಾರ್ಕೊ ಎಕ್ಸ್‌ಚೇಂಜ್ ಕಂಪೆನಿ, ಕುವೈಟ್
- ಹಬೀಬ್ ಎಕ್ಸ್‌ಚೇಂಜ್ ಕಂಪೆನಿ, ಅಬುದಾಬಿ, ಯು.ಎ.ಇ.
- ಕುವೈಟ್, ಬಹರಿನ್ ಇಂಟರ್‌ನ್ಯಾಶನಲ್ ಎಕ್ಸ್‌ಚೇಂಜ್ ಕಂಪೆನಿ, ಕುವೈಟ್
- ಲಕ್ಷ್ಮೀದಾಸ್ ಥಾರಿಯಾ ವೆಡ್ ಎಕ್ಸ್‌ಚೇಂಜ್ ಕಂಪೆನಿ, ಮಸ್ಕತ್, ಓಮನ್.
- ಲೀಲಾ ಮೇಘ ಎಕ್ಸ್‌ಚೇಂಜ್ ಕಂಪೆನಿ, ದುಬೈ.
- ಮುಸನ್‌ಡಾಮ್ ಎಕ್ಸ್‌ಚೇಂಜ್, ರುವಿ, ಓಮನ್
- ಓಮನ್ ಎಂಡ್ ಯು.ಎ.ಇ. ಎಕ್ಸ್‌ಚೇಂಜ್ ಸೆಂಟರ್ ಎಂಡ್ ಕೊ., ಎಲ್‌ಎಲ್‌ಸಿ, ರುವಿ, ಓಮನ್
- ಥೋಮಸ್ ಕುಕ್ ಆಲ್ ರೋಸ್ಟಮನಿ ಎಕ್ಸ್‌ಚೇಂಜ್ ಕೊ. ದುಬೈ, ಯು.ಎ.ಇ.
- ಯು.ಎ.ಇ. ಎಕ್ಸ್‌ಚೇಂಜ್ ಸೆಂಟರ್, ಅಬುದಾಬಿ, ಯು.ಎ.ಇ.
- ಯು.ಎ.ಇ. ಎಕ್ಸ್‌ಚೇಂಜ್ ಸೆಂಟರ್, ಕುವೈಟ್
- ಜೆನಿ ಎಕ್ಸ್‌ಚೇಂಜ್ ಕಂಪೆನಿ, ಎಲ್‌ಎಲ್‌ಸಿ, ಮನಾಮ, ಬೆಹರಿನ್

ಕೆನರಾ ಬ್ಯಾಂಕಿನ ಮನಿ ಟ್ರಾನ್ಸ್‌ಫರ್ ಉಪಲಬ್ಧಿಗಳು

- ವೆಸ್ಟರ್ನ್ ಯುನಿಯನ್ ಮನಿ ಟ್ರಾನ್ಸ್‌ಫರ್
- ಇಲೆಕ್ಟ್ರಾನಿಕ್ ಫಂಡ್ ಟ್ರಾನ್ಸ್‌ಫರ್

### ಬ್ಯಾಂಕಿನ ಶಾಖೆಗಳ ಅಂಕಿ ಅಂಶಗಳು:-

| ಜನಸಂಖ್ಯಾಧಾರಿತ ವಿಂಗಡನೆ | | ಗಾತ್ರಾಧಾರಿತ ವಿಂಗಡನೆ | |
|---|---|---|---|
| ಮಹಾನಗರ ಪ್ರದೇಶ | 519 | ಇ.ಎಲ್.ಬಿ | 103 |
| ಗ್ರಾಮೀಣ ಪ್ರದೇಶ | 766 | ವಿ.ಎಲ್.ಬಿ | 413 |
| ಅರೆನಗರ ಪ್ರದೇಶ | 680 | ಬೃಹತ್ | 993 |
| ನಗರ ಪ್ರದೇಶ | 566 | ಮಧ್ಯಮ | 911 |
| | | ಸಣ್ಣ | 107 |
| ಒಟ್ಟು ಶಾಖೆಗಳು | 2531 | ಒಟ್ಟು ಶಾಖೆಗಳು | 2527 |
| ಗಣಕೀಕರಣಾಧಾರಿತ ವಿಂಗಡನೆ | | **ವಿಶೇಷ ಶಾಖೆಗಳು** | |
| ಎ.ಎಲ್.ಪಿ.ಎಮ್. | 1018 | ಕೃಷಿಗಾಗಿ ಸಾಲ ನೀಡುವ ಶಾಖೆಗಳು | 10 |
| ಬ್ಯಾಂಕ್೨೦೦೦ | 215 | ಸ್ವತ್ತು ವಾಪಾಸು ಪಡೆಯುವ ನಿರ್ವಹಣೆಯ ಶಾಖೆಗಳು | 6 |
| ಐ.ಬಿ.ಬಿ.ಎಸ್. | 1287 | ಬಂಡವಾಳ ಮಾರುಕಟ್ಟೆ ಶಾಖೆಗಳು | 3 |
| | | ಗ್ರಾಹಕರಿಗೆ ಸಾಲ ನೀಡುವ ಶಾಖೆಗಳು | 2 |
| | | ಕಂಪೆನಿ ಸೇವೆ ನೀಡುವ ಶಾಖೆಗಳು | 4 |
| | | ಗೃಹ ಸಾಲ ನೀಡುವ ಶಾಖೆಗಳು | 14 |
| | | ಕೈಗಾರಿಕಾ ಸಾಲ ನೀಡುವ ಶಾಖೆಗಳು | 8 |
| | | ಮಹಿಳೆಯರಿಗೆ ಸಾಲ ನೀಡುವ ಶಾಖೆಗಳು | 2 |

| | | | |
|---|---|---|---|
| | | ಅನಿವಾಸಿ ಭಾರತೀಯರಿಗಾಗಿರುವ ಶಾಖೆಗಳು | 10 |
| | | ವಿದೇಶಿ ಶಾಖೆಗಳು | 19 |
| | | ವಿಶೇಷ ಉಳಿತಾಯ ಶಾಖೆಗಳು | 36 |
| | | ಸಣ್ಣ ಉದ್ದಿಮೆಗಳಿಗೆ ಸಾಲ ನೀಡುವ ಶಾಖೆಗಳು | 38 |
| | | ಶೇರು ಮಾರುಕಟ್ಟೆ ಶಾಖೆಗಳು | 5 |
| ಒಟ್ಟು ಶಾಖೆಗಳು | 2542 | ಒಟ್ಟು ಶಾಖೆಗಳು | 144 |

## ಕೆನರಾ ಬ್ಯಾಂಕ್ ಶತಮಾನೋತ್ಸವ ವರ್ಷದ ಅಭೂತಪೂರ್ವ ಸಾಧನೆ

ಕೆನರಾ ಬ್ಯಾಂಕ್ 2005-2006ನೇ ಸಾಲಿನಲ್ಲಿ ನಡೆಸಿದ ಗಣನೀಯ ಸಾಧನೆಯ ಬಗ್ಗೆ ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಎಂ.ಬಿ.ಎನ್. ರಾವ್‌ರವರ ವರದಿಯಿಂದ ಆಯ್ದ ಮುಖ್ಯಾಂಶಗಳು ಹೀಗಿವೆ.

1. ಕೆನರಾ ಬ್ಯಾಂಕ್ ಪ್ರಸಕ್ತ ಸಾಲಿನಲ್ಲಿ ಶೇಕಡಾ 21ರಷ್ಟು ಪ್ರಗತಿಯೊಂದಿಗೆ ರೂ.1,343.22 ಕೋಟಿ ರೂ.ಗಳ ಸಾರ್ವಕಾಲಿಕ ನಿವ್ವಳ ಲಾಭ ಗಳಿಸಿದೆ.

2. ಬ್ಯಾಂಕಿನ ನಿರ್ವಹಣಾ ಲಾಭವು ಹಿಂದಿನ ವರ್ಷದ ರೂ. 2,585 ಕೋಟಿಯಿಂದ ಈ ವರ್ಷ ರೂ. 2,612 ಕೋಟಿಗೆ ಏರಿದೆ. ಈ ಆರ್ಥಿಕ ವರ್ಷದ ನಾಲ್ಕನೇ ತ್ರೈಮಾಸಿಕ ಅವಧಿಯಲ್ಲಿ ನಿರ್ವಹಣಾ ಲಾಭವು ಅಭೂತಪೂರ್ವ ಪ್ರಗತಿಯೊಂದಿಗೆ ರೂ. 493.52 ರೂ.ಗಳ ಆದಾಯ ಗಳಿಸಿದೆ.

3. ಬ್ಯಾಂಕಿನ ಒಟ್ಟು ಆದಾಯವು 10.68% ಪ್ರಗತಿಯೊಂದಿಗೆ 10089 ಕೋಟಿ ರೂಪಾಯಿಗಳನ್ನು ತಲುಪಿದೆ.

4. ಬ್ಯಾಂಕಿನ ಒಟ್ಟಾರೆ ವ್ಯವಹಾರ ಪ್ರಸಕ್ತ ವರ್ಷಾಂತ್ಯಕ್ಕೆ 1,96,229 ಕೋಟಿ ರೂಪಾಯಿಗಳ ಮಟ್ಟವನ್ನು ತಲುಪಿದೆ. ಮತ್ತು 21% ಪ್ರಗತಿಯನ್ನು ದಾಖಲಿಸಿದೆ.

5. ಬ್ಯಾಂಕಿನ ಒಟ್ಟು ಗ್ರಾಹಕರ ಸಂಖ್ಯೆ 27.69 ದಶಲಕ್ಷಗಳಾಗಿವೆ.

6. ಬ್ಯಾಂಕಿನ ಒಟ್ಟು ಠೇವಣಿ ಮೊತ್ತ ಕಳೆದ ವರ್ಷದ 96,796 ಕೋಟಿ ರೂಪಾಯಿಗಳಿಂದ ಪ್ರಸ್ತುತ ವರ್ಷ 1,16,803 ಕೋಟಿ ರೂಪಾಯಿಗಳಿಗೆ ತಲುಪಿ 20.67% ಪ್ರಗತಿಯಾಗಿದೆ.

7. ಬ್ಯಾಂಕಿನ ಒಟ್ಟು ಮುಂಗಡಗಳಲ್ಲಿ ಶೇಕಡಾ 31.45 ಪ್ರಗತಿಯಾಗಿದ್ದು ಕಳೆದ ವರ್ಷದ ರೂ. 60,421 ಕೋಟಿಗಳಿಂದ ಪ್ರಸಕ್ತ ಸಾಲಿನಲ್ಲಿ 79,426 ಕೋಟಿ ರೂ.ಗಳ ಮಟ್ಟವನ್ನು ತಲುಪಿದೆ.

8. ಗೃಹಸಾಲ ವಲಯದಲ್ಲಿ ಶೇ 33.50ರ ಪ್ರಗತಿಯೊಂದಿಗೆ ಸಾಲದ ಮೊತ್ತವು 5599 ಕೋಟಿ ರೂ.ಗಳಿಗೆ ಏರಿದೆ.

9. ಬ್ಯಾಂಕಿನ ವಿದೇಶೀ ವ್ಯವಹಾರದ ಮೊತ್ತವು 16.74 ಶೇಕಡಾ ಪ್ರಗತಿಯೊಂದಿಗೆ ರೂ. 98665 ರವರೆಗೆ ತಲುಪಿದೆ. ಇದರಲ್ಲಿ ರಫ್ತು ಕ್ಷೇತ್ರದ ಮೊತ್ತವು 34608 ಕೋಟಿ ಮತ್ತು ಆಮದು ಕ್ಷೇತ್ರದ ಮೊತ್ತವು 25295 ಕೋಟಿ ರೂಪಾಯಿಗಳಾಗಿದೆ.

10. ಕೆನರಾ ಬ್ಯಾಂಕ್ ತನ್ನೆಲ್ಲಾ ಶಾಖೆಗಳನ್ನು ಕಂಪ್ಯೂಟರೀಕರಣಗೊಳಿಸಿದೆ. ಪ್ರಸಕ್ತ ಸಾಲಿನಲ್ಲಿ ಬ್ಯಾಂಕಿನ ಎ.ಟಿ.ಎಂ.ಗಳ ಸಂಖ್ಯೆ 815 ಆಗಿದೆ. ಇಂಟರ್‌ನೆಟ್ ಬ್ಯಾಂಕಿಂಗ್ ಸೌಲಭ್ಯವು 1240 ಮತ್ತು ಮೊಬೈಲ್ ಬ್ಯಾಂಕಿಂಗ್ ಸೌಲಭ್ಯವು 1043 ಶಾಖೆಗಳಿಗೆ ವಿಸ್ತರಣೆಗೊಂಡಿದೆ.

11. ಬ್ಯಾಂಕ್ 2006-2007ರ ಸಾಲಿನಲ್ಲಿ 18.74 ಶೇಕಡಾ ಪ್ರಗತಿಯನ್ನು ನಿರೀಕ್ಷಿಸುತ್ತಿದ್ದು 233000 ಕೋಟಿ ರೂಪಾಯಿಗಳ ಜಾಗತಿಕ ವ್ಯವಹಾರದ ಗುರಿಯನ್ನು ಹೊಂದಿದೆ. ಇದರಲ್ಲಿ ಠೇವಣಿ ಸಂಗ್ರಹದ ಗುರಿ 138000 ಕೋಟಿ ರೂಪಾಯಿಗಳಾಗಿದ್ದು ಮುಂಗಡದ ಗುರಿ 95000 ಕೋಟಿ ರೂಪಾಯಿಗಳಾಗಿದೆ.

11. ಪ್ರಸ್ತುತ ಸಾಲಿನಲ್ಲಿ ಕೆನರಾ ಬ್ಯಾಂಕ್ ಕೋರ್ ಬ್ಯಾಂಕಿಂಗ್ ಪರಿಹಾರ ಕಾರ್ಯಕ್ರಮವನ್ನು ತನ್ನ 1000 ಶಾಖೆಗಳಿಗೆ ವಿಸ್ತರಿಸುವ ಯೋಜನೆಯನ್ನು ಹೊಂದಿದೆ.

ಮೇಲಿನ ವಿವರಣೆಗಳಿಂದ ಭಾರತದ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಕೆನರಾ ಬ್ಯಾಂಕ್ ದಾಖಲಿಸಿದ ಅಭೂತ ಪೂರ್ವಸಾಧನೆಯಿಂದಾಗಿ ದಕ್ಷಿಣ ಕನ್ನಡ ಜಿಲ್ಲೆ ಹೆಮ್ಮೆ ಪಡುವಂತಾಗಿದೆ. ಅದು ನಮ್ಮ ದೇಶದ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸರ್ವ ಪ್ರಥಮ ಸ್ಥಾನವನ್ನು ಪಡೆಯುವಂತಾಗಲಿ ಎಂದು ಒಳಲಂಕೆಯ ಉಗ್ರನರಸಿಂಹ ದೇವರನ್ನು ಪ್ರಾರ್ಥಿಸುತ್ತೇನೆ.

~~**~~




ಬ್ಯಾಂಕಿನ ಶತಮಾನೋತ್ಸವ ಕಾರ್ಯಕ್ರಮದಲ್ಲಿ ಭಾರತ ಸರಕಾರದ ವಿತ್ತ ಸಚಿವ ಮಾನ್ಯ ಶ್ರೀ ಪಿ. ಚಿದಂಬರಂ ಮತ್ತು ಆಡಳಿತ ನಿರ್ದೇಶಕ ಶ್ರೀ ಎಂ.ಬಿ.ಎನ್. ರಾವ್



**Sri M.B.N. Rao**
**Chairman & Managing Director**



Sri Alok Kumar Mishra
Executive Director



Sri C. G. Chaturvedi
Director representing
Govt. of India



Sri G. Srinivasan
Director representing
Reserve Bank of India



Sri R. K. Avasthi
Director representing other
than workman employees



Sri A.N. Balasubramanian
Director representing
workman employees



Sri S. Shabbeer Pasha
Part time non-official director



Sri Pankaj Gopalji Thakker
Part time non-official
director



Dr. Sonelal
Shareholder Director



Sri M. P. Mehrotra
Shareholder Director



Sri S.C. Gupta
Shareholder Director



Sri U.N. Kapur
Shareholder Director

# CHAIRMANS OF CANARA BANK FROM 1906 TO 2006


Ammembal Subbarao Pai
1906-1909


Venkataramana Pai
1909-1916


V. Rama Rao
1917-1918


A. Srinivas Pai
1918-1942


B. Venkat Rao Baliga
1942-1945


A. Damodar Pai
1945-1962


K.P.J. Prabhu
1962-1973


C.E. Kamath
1973-1982



**B. Rathnakar**
**1982-1988**



**N.D. Prabhu**
**1988-1992**



**J.V. Shetty**
**1992-1997**



**T.R. Shridharan**
**1997-1999**



**R.J. Kamath**
**2000-2001**



**R.V. Shastri**
**2001-2004**



**V.P. Shetty**
**2004-2005**



**M.B.N. Rao**
**2005-**

## ಅಮ್ಮೆಂಬಳ ಸುಬ್ಬರಾವ್ ಪೈ ಹುಟ್ಟಿದ ಸ್ಥಳದಲ್ಲಿ
## ಈಗಿನ ಮುಲ್ಕಿ ಸಭಾಗೃಹದ ಕಟ್ಟಡ



ಕೆಳಗಿನ ಅಂತಸ್ತಿನಲ್ಲಿ ಕೆನರಾ ಬ್ಯಾಂಕಿನ ಶಾಖೆ ಇದೆ.
ಮೇಲಿನ ಅಂತಸ್ತಿನಲ್ಲಿ ಶ್ರೀಧರ ಪದ್ಮನಾಭ ಕಾಮತ್ ಮೆಮೋರಿಯಲ್‌ಹಾಲ್,
ಅಮ್ಮೆಂಬಳ ಸುಬ್ಬರಾವ್‌ಪೈ ರಂಗಮಂಟಪ ಮತ್ತು
ಟಿ.ಎ.ಪೈ ಮೆಮೋರಿಯಲ್ ಬಾಲ್ಕನಿ

